*Palayagar Series.*

# PALAYAGARS.

OF

# CHITRADURG

BY

M. S. PUTTANNA B. A.



ಚಿತ್ರದುರ್ಗದ

# ಪಾಳಯಗಾರರು.

ಎಂ. ಎಸ್. ಪುಟ್ಟಣ್ಣ, ಬಿ.ಎ.,

ರಚಿಸಿದ್ದು



**1924.**



ದಿ ನವರ್ ಪ್ರಿಂಟಿಂಗ್ ಪ್ರೆಸ್, ಚಿಕ್ಕಪೇಟೆ, ಬೆಂಗಳೂರು ಸಿಟಿ

# PREFACE.

Chitradurga was a small principality before the Battle of Talikota *i.e.* 1565 A. C. Under a system of palayaputs or military vassalage organised by the Emperors that preceded the Vijayanagar Empire, a number of petty states had come into existence, and Chitradurga was one of such states established during the declining days of that Empire. Maththi Timmanna Nayaka was the original founder of that State, who practically earned the kingdom through his own personal valour though a nominal distinction of the Nayak of Chitradurga was conferred on him by the titular Suzerains. Subsequently, Vobanna Nayaka the second chief of the line, severed his connection with the Vijayanagar Sovereigns and declared his independence.

Two lines of kings *viz* Maththi dynasty and Bilachode dynasty ruled together for 211 years over a pretty large area comprising the present District of Chitradurga together with some outlying tracts. These princes were invariably valorous in battle, merciful and generous to their enemies, wise and discreet in their administration, far-sighted in their policy, thoroughly religious and orthodox in their belief, and liberal to a fault. These powerful chieftains had some French Engineers in their service and built very strong fortresses and other works of public utility as the standing monuments of their glory. Had these Palayagars routed Hyder's army and become victorious, what change there would have been in the history of Southern India, it is difficult to tell.

The important part played by these Palayagar vassals in the southern part of the Peninsula fills up

a large portion of the history of our southern Hindustan. The all absorbing conquests of Hyder Ali destroyed every vestige of these useful little states. Fully conscious though I am of my own inability to write the histories of these several states, I have yet made a humble attempt in this direction and the History of Chitradurg is intended to be the first of the series as this Principality is the first and about the best among these states otherwise called Palayaputs.

In the course of my inquiry regarding the Palayagars of this State, I came by the following materials:—

I. A copy of a manuscript on palmyra leaves kindly lent by Chinnadamane Ramanna, Sanbogue of the Sultanipur Firka of the present Taluk of Chitradurg. By virtue of the peculiarly influential position held by the ancestors of this person, they may be presumed to have made an accurate record of the events as they occurred.

II. Another manuscript copy on paper kindly furnished to me by Basappa Nayak an aged descendant of the great Palayagars. This copy contains a large number of minor incidents which have the form of mere brief notes and without which the work would be dry and uninteresting. In some places such as the rebellion of the army and the consequent revolution on two occasions and the wars with Nawab Hyder Ali, the account is fuller.

III. Another copy of a manuscript giving the history of the reign of Madakari Nayak the last.

IV. The Mysore Gazetteer and other records.

My history is based on these important records written by contemporary historians connected with the Palace of Chitradurg, who there is every reason to believe, might have lived at the time of the fall of Chitradurg, and on some Inscriptions published by the Mysore Government, and also on some local traditions in support of which there are certain tangible evidences at the place.

In comparing these manuscripts, I experienced some difficulty which I had to wade through with the assistance of Mr. Girimaji Rao, Inspector of Vaccination in the Mysore District, to whom my thanks are due. I have further to thank the members of the Mysore University Publication Board for pointing out some inadvertent errors of omission and commission in my unrevised manuscripts writtten carelessly as a literary recreation. Besides I shall be entirely wanting in my duty if I fail to mention here my thanks to Rajakaryaprasakta, Rao Bahadur M. Shama Rao Esq., M.A. who encouraged me to give a readable shape to the unhewn materials lying with me for a long time.

In mentioning the dates, I have followed the Saka years as well as the names of the Hindu Samvath years as found in the original source materials. Extracts from songs or ballads in praise of Bharmappa Nayaka's conquests are also inserted. A chronological list with the corresponding Samvat years and years of the Christian era, a list of kings with dates, a geneological tree and a glossary of peculiar terms with their meanings as used in the book, are also given. No separate map is inserted as the map of Mysore or of the Chitradurg District will serve the purpose. Prompted by a sense of respect to the departed worthies who played important parts in the history of the country, I have inserted a few names perhaps too many. Names such as ಗುದಗತ್ತಿ, ಭೂನಪ್ಪ, ದೇವ್ವೈಯ್ಯ, ಕಂರಮಾಲೆ, etc., which are not generally found now-a-days, are given as mere curiosities to be noted by students of history as to how even names of persons change with the change of the times.

*Basavanagudi, Bangalore City.*
*October 29, 1924.*

**M. S. PUTTANNA.**

# ಪೀಠಿಕೆ.

ಚಿತ್ರದುರ್ಗದಲ್ಲಿ ಕೆಲವು ವರುಷಗಳವರೆಗೆ ನಾನು ವಾಸವಾಗಿದ್ದೆ, ಅಲ್ಲಿನ ಬೆಟ್ಟದ ಮೇಲೂ ಅದರ ಸುತ್ತಲೂ ನಿರ್ಣಯವಾಗಿ ಕಟ್ಟಿದ ಕೋಟೆಕೊತ್ತಲಗಳೂ, ಎಣ್ಣೆ ತುಪ್ಪವನ್ನು ತುಂಬುವ ಭಾವಿಗಳೂ, ಧಾನ್ಯದ ಕಣಜಗಳೂ, ಮದ್ದು ಗುಂಡು ಫಿರಂಗಿ ಇವುಗಳನ್ನು ತಯಾರ್ಮಾಡಲು ಬಂಡೆಗಳನ್ನು ಕೊರೆದು ಮಾಡಿದ್ದ ಏರ್ಪಾಡುಗಳೂ, ಇವೇ ಮೊದಲಾದ ಅನೇಕ ಸಂಗತಿಗಳನ್ನು ನೋಡಲಾಗಿ, ಅಲ್ಲಿ ಆಳುತಿದ್ದ ದೊರೆಗಳ ಐಶ್ವರ್ಯ ಎಂಥಾದ್ದಾಗಿರಬಹುದೆಂದು ಆಶ್ಚರ್ಯ ಹುಟ್ಟಿತು. ಇವರ ಚರಿತ್ರೆಯನ್ನು ಯಾರು ಬರೆದಿರಿಸಿದಾರೆ ಅದು ಎಲ್ಲಿ ದೊರೆಯಬಹುದು ಎಂದು ವಿಚಾರ ಮಾಡಿದ್ದರಲ್ಲಿ,

೧ ಚಿತ್ರದುರ್ಗದ ತಾಲ್ಲೋಕು ಸುಲ್ತಾನಿಪುರದ ಶಾನುಭೋಗ ಚೆನ್ನದ ಮನೆ ರಾಮಣ್ಣನವರಲ್ಲಿ ಲಕ್ಷಣವಾಗಿ ಬರೆದ ಓಲೆ ಪ್ರತಿ ಯೊಂದು ದೊರಕಿತು. ಈಶಾನುಭೋಗರ ಪೂರ್ವಿಕರಿಗೆ ಅರಮನೆಯಲ್ಲಿದ್ದ ಅಧಿಕಾರದ ಗೌರವವನ್ನು ನೋಡಿದರೆ, ಈ ಪ್ರತಿಯನ್ನು ಪೂರ್ವದಲ್ಲಿಯೇ ಆಗಾಗ್ಗೆ ಬರೆದ ಹಾಗೂ ಅದರಲ್ಲಿರತಕ್ಕ ವಿಷಯಗಳು ನಂಬಿಕೆಗೆ ಅರ್ಹವಾಗಿಯೂ ಕಂಡುಬರುವುದು.

೨ ೨ನೇ ಪ್ರತಿಯೊಂದು ದೊರೆಯಿತು. ಇದನ್ನು ಪಾಳಯಗಾರರ ವಂಶಸ್ಥರಾದ ಬಸಪ್ಪನಾಯಕರೆಂಬುವರು ತಮ್ಮಲ್ಲಿದ್ದ ಒಂದು ಬಖೈರಿಗೆ ಪ್ರತಿ ಬರೆಯಿಸಿ ಕೊಡಿಸಿದರು.

೩ ಕಡೇ ಮದಕರಿನಾಯಕನ ಚರಿತ್ರೆ ಪ್ರತಿ.

೪ ಮೈಸೂರ ಗೆಜೆಟೀರು ಮೊದಲಾಗಿ ಇತರ ಸಾಧನಗಳು.

ಇವು ದೊರೆತವು.

ಮೇಲೆಕಂಡ ಚೆನ್ನದಮನೆ ರಾಮಣ್ಣನವರಿಗೂ ಬಸಪ್ಪನಾಯಕರು ಮುಂತಾದವರಿಗೂ ಇದಕ್ಕಾಗಿ ನಾನು ಕೃತಜ್ಞನಾಗಿದೇನೆ. ಇದ

ಲ್ಲದೆ ಸ್ಥಳದಲ್ಲಿ ಜನವಾರ್ತೆಯಿಂದ ಗತಾನುಗತಿಕವಾಗಿ ತಿಳಿಯಬಂದು ಪುಷ್ಟೀಕರಿಸಲ್ಪಟ್ಟಿರುವ ಕೆಲವು ವಿದ್ಯಮಾನಗಳೂ ಪೂರ್ವದ ಕಥಾ ಸಂದರ್ಭಗಳನ್ನು ವಿಶದಮಾಡಿದವು.

ಇವುಗಳ ಮತ್ತು ಶಾಸನಗಳ ಆಧಾರದಮೇಲೆ ಈಗಿನ ಕಾಲದ ಪುಸ್ತಕಗಳ ರೀತಿಯಲ್ಲಿ ಒಂದು ಪ್ರತಿಯನ್ನು ಬರೆದಿದೇನೆ. ಸನ್ ೧೫೬೫ನೇ ಈಸವಿಯಲ್ಲಿ ನಡೆದ ತಾಳೀಕೋಟೆಯುದ್ಧದಲ್ಲಿ ತುರಕರು ವಿಜಯನಗರದ ಸಂಸ್ಥಾನವನ್ನು ಮುರಿದಾಗಿನಿಂದ ಶ್ರೀಮನ್ ಮೈಸೂರ ಮಹಾರಾಜರವರ ಪೂರ್ವೀಕರು ಹೊಂದಿದ ವಿಜಯ, ನವಾಬ ಹೈದರಲ್ಲಿಖಾನ್ ಈತನ ಮಗ ಟೀಪುಸುಲ್ತಾನ್ ಈ ತಂದೆ ಮಕ್ಕಳು ಎಲ್ಲವನ್ನೂ ಆಕ್ರಮಿಸುವ ರೀತಿಯಲ್ಲಿ ಮಾಡಿದ ಬಿಟ್ಟು ಗಾಗಳ,ಸಹಾ ಜರಗುವವರೆಗೂ, ದಕ್ಷಿಣದೇಶದಲ್ಲಿ ನಡೆದ ಸುಮಾರು ೨೫೦ ವರುಷಗಳ ಚರಿತ್ರೆಯು ಇದುವರೆಗೆ ಹೊರಪಟ್ಟಿಲ್ಲ. ಇದು ಕೃಷ್ಣಾನದಿಗೆ ದಕ್ಷಿಣದಲ್ಲಿ ವಿಶೇಷವಾಗಿದ್ದ ಪಾಳಯಪಟ್ಟುಗಳ ಚರಿತ್ರೆಯೇ ಆಗಿದೆ. ಇದನ್ನು ಒಂದೊಂದಾಗಿ ತೆಗೆದುಕೊಂಡು ಬರೆಯಬೇಕೆಂದು ಯತ್ನಮಾಡಿರುವ ನನಗೆ ಈ ಕಾರ್ಯಕ್ಕೆ ಬೇಕಾದ ಯೋಗ್ಯತೆ ಕಡಮೆಯಿದ್ದಾಗ್ಯೂ ಔತ್ಸುಕ್ಯ ಹೆಚ್ಚಾಗಿದೆ. ಆದರೂ ಕೈಲಿ ಸಾಗದ ಪ್ರಯತ್ನವನ್ನು ಮಾಡಿದೇನೆ. ಈ ಚರಿತ್ರೆಯ ಸರಣಿಗೆ ಚಿತ್ರದುರ್ಗದ ಸಂಸ್ಥಾನದ ಕಥೆಯೇ ಮೊದಲನೆಯದಾಗಿರಲೆಂದು ನಿಷ್ಕರ್ಷೆಮಾಡಿದೆ. ಇಲ್ಲಿನ ರಾಜರು ಯುದ್ಧದಲ್ಲಿ ತಪ್ಪದೆ ಪರಾಕ್ರಮಿಗಳಾಗಿಯೂ ಶತ್ರುಗಳಲ್ಲಿ ದಯ ಉಳ್ಳವರಾಗಿಯೂ, ರಾಜ್ಯಭಾರದಲ್ಲಿ ಅಧಿಕವಾದ ವಿತರಣೆಯುಳ್ಳವರಾಗಿಯೂ, ರಾಜಕೀಯವ್ಯಾಪಾರದಲ್ಲಿ ದೂರದೃಷ್ಟಿಯುಳ್ಳವರಾಗಿಯೂ, ಕೇವಲ ದೈವಭಕ್ತರಾಗಿಯೂ, ಅತಿಯಾಗಿ ಉದಾರಿಗಳಾಗಿಯೂ ಇದ್ದರು. ಲೋಕೋಪಕಾರಾರ್ಥವಾಗಿ ಇವರು ಮಾಡಿದ ಕೆಲಸಗಳು ಶಾಶ್ವತವಾಗಿ ನಿಂತಿವೆ. ಈ ಸಂಸ್ಥಾನವನ್ನು ಹೈದರನು ಆಗ ಜೈಸದೆ ಇದ್ದರೆ, ದಕ್ಷಿಣದೇಶದ ಚರಿತ್ರೆಯು ಹೇಗೆ ಬದಲಾಯಿಸುತಿತ್ತೋ ಈಗ ಹೇಳುವುದು ಕಷ್ಟವಾಗಿದೆ.

ಇದನ್ನು ಬರೆಯುವಾಗ್ಗೆ ಮಾತ್ರುಕೆಗಳು ಬಂದಕ್ಕೆ ಬಂದನ್ನು ಹೋಲಿಸುವುದರಲ್ಲಿ ಮೈಸೂರು ಡಿಸ್ಟ್ರಿಕ್ಟು ಸಿಡಬಿನ ಇನ್ಸ್ಪೆಕ್ಟರ್

ಮ|| ರಾ|| ಗಿರಿಮಾಜಿರಾಯರಿಗೂ, ಹೊತ್ತು ಕಳೆಯುವದಕ್ಕಾಗಿ ಬರೆದ ಈ ಪುಸ್ತಕದಲ್ಲಿ ಬೇಕಾಬಿಟ್ಟಿಯಾಗಿ ನನ್ನಿಂದ ಬಿದ್ದಿದ್ದ ಕೆಲವು ಸ್ಖಾಲಿತ್ಯಗಳನ್ನು ತೋರಿಸಿ ಕೊಟ್ಟದ್ದಕ್ಕಾಗಿ ಮೈಸೂರು ಯೂನಿವರ್ಸಿಟಿಯ ಗ್ರಂಥಪ್ರಕಟನ ಮಂಡಲಿಯವರಿಗೂ ನನ್ನ ಕೃತಜ್ಞತೆಯನ್ನು ಇಲ್ಲಿ ಸೂಚಿಸಿದೇನೆ. ಕರಟುಮುರಟಾಗಿ ಬಿದ್ದಿದ್ದ ಈ ಚರಿತ್ರೆಗೆ ನನ್ನ ಕೈಲಾದಮಟ್ಟಿಗೆ ಒಂದು ರೂಪವನ್ನು ಕೊಡಲು ಪ್ರೋತ್ಸಾಹಿಸಿದ ವಿದ್ಯಾಭ್ಯಾಸದ ಇಲಾಖೆಯ ಪ್ರೊಫೆಸರ್ ಅಧಿಕಾರಿಗಳಾಗಿದ್ದ ಮ|| ರಾ|| ರಾ|| ಶ್ರೀರಾಜಕಾರ್ಯಪ್ರಸಕ್ತರಾವ್ ಬಹಾದುರ್ ಎಂ. ಶಾಮರಾವ್ ಎಂ. ಎ. ಯವರಿಗೆ ನನ್ನ ಕೃತಜ್ಞತೆಯನ್ನು ಇಲ್ಲಿ ನಮೂದಿಸದೆ ಬಿಟ್ಟಲ್ಲಿ ನಾನು ನ್ಯಾಯವಾಗಿ ಮಾಡಬೇಕಾದ ಕರ್ತವ್ಯಕ್ಕೆ ಶುದ್ಧವಾಗಿ ಲೋಪವುಂಟಾಗುವುದೆಂದು ನಂಬಿದೇನೆ.

ಬೆಂಗಳೂರು ಬಸವನಗುಡಿ,
ರಕ್ತಾಕ್ಷಿ ಸಂ|| ಕಾರ್ತೀಕ ಶು||
ಬಲಿಪಾಡ್ಯಮಿ.

ಎಂ. ಎಸ್. ಪುಟ್ಟಣ್ಣ.

# ಉಪೋದ್ಘಾತ.



ತುಂಗಭದ್ರಾ ತೀರದಲ್ಲಿದ್ದ ವಿಜಯನಗರದ ಸಂಸ್ಥಾನದ ಚಕ್ರಾಧಿಪತಿಗಳು ಬಹು ಖ್ಯಾತಿಯಿಂದ ಆಳುತಾ ಇರುವಾಗ ಈಗಿನ ಹೈದರಾಬಾದು ಪ್ರಾಂತಗಳಲ್ಲಿ ಆಳಿಕೊಂಡಿದ್ದ ತುರುಕರ ಕಡೆಯಿಂದ ರಾಜಿಕಗಳು ಬಹಳವಾಗಿದ್ದವು. ಅದರಿಂದ ಯಾವಾಗಲೂ ತಯಾರಾದ ಸೇನೆಯು ಸಿದ್ಧವಾಗಿರುವದಕ್ಕಾಗಿಯೂ, ವಿಸ್ತಾರವಾದ ತಮ್ಮರಾಜ್ಯದ ದೊರೆತನವು ಬಿಗಿಯಾಗಿ ನಡೆಯುವದಕ್ಕಾಗಿಯೂ, ಆ ಕಾಲದಲ್ಲಿ ಅನುಕೂಲವಾದದ್ದೆಂದು ಎಣಿಸಲ್ಪಟ್ಟು ಪೂರ್ವದಿಂದಲೂ ಅಲ್ಲಲ್ಲಿ ರೂಢಿಗೆ ಬಂದಿದ್ದ ಒಂದು ಏರ್ಪಾಡನ್ನು ಉಪಯೋಗಮಾಡಿಕೊಂಡಿದ್ದರು. ಇವರ ಚಕ್ರಾಧಿಪತ್ಯದ ಮುಖ್ಯವಾದ ಸ್ಥಳಗಳಲ್ಲಿ ಅಧಿಕಾರ ಮಾಡಲು ಪ್ರಮುಖರಾದ ಜನರನ್ನು ನೇಮಿಸಿದ್ದರು ಈ ಅಧಿಕಾರಿಗಳಿಗೆ ನಾಯಕರು ಎಂದು ಸರ್ವಸಾಧಾರಣವಾಗಿ ಅನೇಕ ಸ್ಥಳಗಳಲ್ಲಿ ಹೆಸರಾಗಿತ್ತು. ಈ ನಾಯಕರು ತಂತಮ್ಮ ಅಧಿಕಾರಕ್ಕೆ ಒಳಪಟ್ಟ ಸೀಮೆಗಳಲ್ಲಿ ದೊರೆಗಳಂತೆ ಇರುತಾ, ಅಲ್ಲಿನ ಪ್ರಜೆಗಳಿಂದ ಕಂದಾಯ ಮೊದಲಾದ್ದನ್ನು ವಸೂಲ್ಮಾಡಿಕೊಂಡು ಚಕ್ರಾಧೀಶ್ವರರಿಗೆ ನಿಗದಿಯಾದ ಕಪ್ಪವನ್ನು ವರುಷ ವರುಷವೂ ಕೊಡುತಾ, ತಯಾರಾದ ಸೇನೆಯನ್ನಿಟ್ಟು ಯುದ್ಧಪ್ರಸಕ್ತಿಬಿದ್ದಾಗ ವಿಜಯನಗರದ ಅಧೀಶ್ವರರಿಗೆ ಸಹಾಯ ಮಾಡುತಾ ಇದ್ದರು. ಈ ಕಾರಣದಿಂದ ಈ ನಾಯಕರಿಗೆ ಪಾಳಯಗಾರರೆಂದು ಹೆಸರುಬಂತು. ಪಾಳಯಗಾರರೆಂದರೆ, ದಂಡಿನೊಡನೆ ಪಾಳಯವನ್ನು ಹಾಕಿ ಇಳಿದುಕೊಂಡು ಕದನಕ್ಕೆ ಸಿದ್ಧವಾಗಿರತಕ್ಕವರೆಂದು ಅರ್ಥ. ಇವರು ಮೊಗಲಾಯಿ ಸೇನೆಯವರಮೇಲೆಯೂ ಯುದ್ಧಮಾಡಿ ಜಯವನ್ನು ಹೊಂದಿದರು. ಸಾಧಾರಣವಾಗಿ ಈ ಪಾಳಯಗಾರರಲ್ಲಿ ಅನೇಕರು ಬೇಡರು, ಅಥವಾ ವ್ಯಾಧರು. ಈ ಜಾತಿಯವರಲ್ಲಿ ಊರಬೇಡರು ಮೇಸಬೇಡರು ಎಂದು ಎರಡು ಪಂಗಡ ಉಂಟು. ಇವರಲ್ಲಿ ಮೇಸಬೇಡರು ಪರಿಶುದ್ಧ

ರಂತೆ. ಇವರು ಪಾನಮಾಡುವುದಿಲ್ಲ, ಈಚಲನ್ನು ಮುಟ್ಟುವುದಿಲ್ಲ, ಈಚಲುಚಾಪೆಯನ್ನು ಕೂಡಾ ಹಾಸಿಕೊಂಡು ಅದರಮೇಲೆ ಕೂತು ಕೊಳ್ಳವುದಿಲ್ಲ. ಊರಬೇಡರಲ್ಲಿ ಇಂಥಾನಿಯಮಗಳು ವಿಶೇಷವಾಗಿ ಲ್ಲವಂತೆ. ಈ ಎರಡು ಪಂಗಡದವರೂ ಪರಸ್ಪರ ಕೊಟ್ಟು ತಂದುಮಾಡು ವುದಿಲ್ಲ. ಈ ಬೇಡರ ಜಾತಿಯವರಿಗೆಲ್ಲಾ ನರಸಿಂಹಸ್ವಾಮಿ, ಕಂಪಳ ದೇವರು, ಸಿದ್ದಯ್ಯ, ರಂಗೈಯ್ಯ, ಚಿತ್ರದೇವರು, ಎಂಬ ಮನೆದೇವರು ಗಳುಂಟು.

ಅಂಣತಮ್ಮಂದಿರಾದ ಮೂರು ಜನ ನಾಯಕರು ದಿಳ್ಳಿಯ ದೊರೆಗ ಳಲ್ಲಿದ್ದಂತೆಯೂ ಅಲ್ಲಿಂದ ಗುನಗು ಸಮೇತ ದಕ್ಷಿಣಕ್ಕೆ ದುರ್ಗದ ಸೀಮೆ ಗೆ ಬಂದಂತೆಯೂ ತಿಳಿಯಬಂದಿದೆ. ಚಿತ್ರದುರ್ಗದಲ್ಲಿ ಈ ಇಬ್ಬರು ಸಹೋದರರ ಸಂತತಿಯವರು ಆಳುತಿದ್ದರು. ಮೊದಲನೇದು ಮತ್ತಿ ಸಂತತಿ, ಎರಡನೇದು ಬಿಳಿಚೋಡುಸಂತತಿ. ಮತ್ತಿ ಸಂತತಿಗೆ ಮೂಲ ಪುರುಷ ಮತ್ತೀ ತಿಮ್ಮಂಣನಾಯಕ. ಈತನಿಗೆ ವಿಜಯನಗರದ ಸಂಸ್ಥಾ ನದಿಂದ ಶ॥ ೧೪೯೦ ರಲ್ಲಿ ದುರ್ಗದನಾಯಕತನ ಅಪ್ಪಣೆಯಾಯಿತು. ಇದಕ್ಕೆ ಮುಂಚೆನಿಂದಲೂ ತಿಮ್ಮಂಣನಾಯಕನೂ ಇವನ ಹಿರಿಯರೂ ಶ॥ ೧೪೭೮ ನೇ ನಳ ಸಂವತ್ಸರದಿಂದ ಈ ದೇಶದಲ್ಲಿ ನೆರಿಗಟ್ಟಿಕೊಂಡು ಇದ್ದರು. ತಿಮ್ಮಂಣನಾಯಕನೇ ಮೊದಲು ಮೇಲ್ ದುರ್ಗದ ಕೋಟೆ ಯನ್ನು ಕಟ್ಟಿಸಿದವನು. ಇವನ ಪರಾಕ್ರಮವು ಅಭಿಮನ್ಯು ಮೊದ ಲಾದ ಮಹಾವೀರರ ಶೌರ‍್ಯವನ್ನು ಜ್ಞಾಪಕಕ್ಕೆ ತರುತಿದೆ. ಇವನ ತರುವಾಯ ಬಂದ ಅರಸುಗಳೆಲ್ಲರೂ ಅತ್ಯಂತವಾದ ಶೌರ‍್ಯವನ್ನು ತೋ ರಿಸುತಾ ಸಮಪಾಳಿಗಳಾಗಿ ಶತ್ರುಗಳಾದ ಪಾಳಯಗಾರರನ್ನು ಗೆದ್ದು ತಮ್ಮ ಸೀಮೆಯನ್ನು ವಿಸ್ತರಿಸುತಾ ಬಂದರು. ಈ ಮತ್ತೀ ಸಂತ ತಿಯು ಒಟ್ಟು ಆರು ತಲೆಗೆ ಶ॥ ೧೬೧೦ನೇ ಶುಕ್ಲ ಸಂ॥ ದಲ್ಲಿ ನಿರ್ವಂಶ ವಾಯಿತು. ಇವರಲ್ಲಿ ೨ನೇ ದೊರೆಯಾದ ದಧ್ಯಣ್ಣದ ಓಬಂಣನಾಯ ಕನಿಗೆ ರಸಸಿದ್ಧರು ಮದಕರಿ ಎಂಬ ಬಿರುದನ್ನು ಕೊಟ್ಟರು. ಈ ಬಿರುದು ಉಚ್ಚಾರಣೆಯಲ್ಲಿ ಕೆಟ್ಟು ಮೆದಕೇರಿ ಎಂಬ ರೂಪವನ್ನು ಹೊಂದಿತು.

ತರುವಾಯ ಬಿಳಿಚೋಡು ಮನೆತನಕ್ಕೆ ದೊರೆತನಬಂತು. ಹಿಂದಿನವರಂತೆಯೇ ಈ ಸಂತತಿಯ ಪಾಳಯಗಾರರೂ ಸಹಾ ಯುದ್ಧದಲ್ಲಿ ಶೂರರು, ರಾಜ್ಯಭಾರಕ್ರಮದಲ್ಲಿ ವಿವೇಕಿಗಳು, ಬಿಳಿಚೋಡು ವಂಶಕ್ಕೆ ಪ್ರಥಮರಾಜನಾದ ಭರಮಪ್ಪನಾಯಕನೇ ವಿಶೇಷವಾಗಿ ಪ್ರಸಿದ್ಧನಾದವನು. ಈತನ ಆಳಿಕೆಯಲ್ಲಿ ರಾಜ್ಯವು ಬಹಳವಾಗಿ ವಿಸ್ತರಿಸಲ್ಪಟ್ಟಿತು. ದಿಲ್ಲೀಚಕ್ರವರ್ತಿಗಳ ಕಡೆ ಸುಬೇದಾರರೂ, ಮರಾಟೆಯವರೂ, ಇತರ ಚಿಕ್ಕ ಸಂಸ್ಥಾನೀಕರೂ ಸಹಾ ಈ ದೊರೆಯಲ್ಲಿ ಸ್ನೇಹವನ್ನು ಮಾಡಿಕೊಂಡು ಯುದ್ಧಕಾಲಗಳಲ್ಲಿ ಈ ದೊರೆಯ ಸಹಾಯವನ್ನು ಪಡೆಯುತಾ ದುರ್ಗದ ಸಂಸ್ಥಾನಕ್ಕೆ ತಾವು ತೆಗೆದುಕೊಂಡಿದ್ದ ಕೆಲವು ರಾಷ್ಟ್ರಗಳನ್ನೂ ಕೂಡ ಬಿಟ್ಟುಕೊಡುತಾ ಬಂದರು. ಈ ಭರಮಪ್ಪನಾಯಕನ ಆಳಿಕೆಯಲ್ಲಿ ಮುಲಕಿ ಕಂದಾಯ ಮೊದಲಾದ ಭಂಡಾರದ ಸುವರ್ಣಾದಾಯಗಳು ಕ್ರಮಪಟ್ಟಿದ್ದಲ್ಲದೆ ಪ್ರಜಾ ಸೌಖ್ಯಕ್ಕೆ ಬೇಕಾದ ಏರ್ಪಾಡುಗಳೂ, ಕಟ್ಟಡಗಳೂ, ಕೆರೆಗಳೂ, ಹೆಚ್ಚಾಗಿ ನಿರ್ಮಾಣಮಾಡಲ್ಪಟ್ಟವು.

ತಿಂಮ್ಮಣ್ಣನಾಯಕನನ್ನೂ ಇವನ ಹಿರಿಯರನ್ನೂ ಅನುಸರಿಸಿಕೊಂಡು ಆನೆಗೊಂದಿ ಸಂಸ್ಥಾನದಿಂದ ಬೆನ್ನಹತ್ತಿಬಂದ ವಿರೂಪಾಕ್ಷ ಜೋಯಿಸನ ಮಗ ಪರಶುರಾಮಪ್ಪನು "ಹರಿಯದ ಹಚ್ಚಡ ಮುರಿಯದ ಬಡವೆ" ಕೊಡಿಸಬೇಕೆಂದು ಕೇಳಿಕೊಂಡಪ್ರಕಾರ, ಆ ಪಾಳಯಗಾರನು ಆತನ ಮಕ್ಕಳಿಗೆ ಶಾನುಭೋಗತನವನ್ನು ನೇಮಕಮಾಡಿ ಅವನಿಗೆ ರೈತರಿಂದ ಆಯ ಮೊದಲಾದ್ದು ಸಲ್ಲಬೇಕೆಂದು ನಿಗದಿಮಾಡಿಕೊಡಿಸಿದನು. ಅದೇಕಾಲದಲ್ಲಿ ಈ ದೊರೆಯು ಆಯಾ ಗ್ರಾಮಗಳಿಗೆ ಗೌಡ, ತಳವಾರ, ಬೇಗಾರ ಮೊದಲಾದ ಆಯಗಾರರನ್ನು ನೇಮಿಸಿದನು. ಭರಮಪ್ಪನಾಯಕನ ದಿವಸದಲ್ಲಿ ಆಯಗಾರರು ಅರಮನೆಗೆ ಬಿಟ್ಟಿಚಾಕರಿಯನ್ನು ಮಾಡಬೇಕೆಂದು ನಿರ್ಣಯಮಾಡಿದನು. ಮತ್ತು ಸುವರ್ಣಾದಾಯವು ಸುಮಾರು ಎಲ್ಲಾಬಾಬುಗಳೂ ಸೇರಿ ೪೦೦೦೦೦ರ ವರಹ ವಾಗಬಹುದೆಂದು ತಿಳಿಯಬರುವುದು. ಈ ನಾಲ್ಕು ಲಕ್ಷ ವರಹವೂ ಸುಮಾರು ಈಗಿನ ಬೆಲೆ ಕಡಮೆಯಾದ ನಾಣ್ಯದಲ್ಲಿ ೩೦ ಲಕ್ಷ ರೂಪಾಯಿಗೆ ಹೆಚ್ಚಾಗಬಹುದು. ಇದರಲ್ಲಿ ಗದ್ದೆ, ಬೆದ್ದಲು, ಕಾಡಾರಂಬ, ಮಾರ್ಗಸುಂಕ,

ಸ್ಥಳಸುಂಕ, ಹುಲ್ಲು ಬನ್ನಿ, ಇಟ್ಟಿಗೆ ಗುತ್ತಿಗೆ, ಎಲೆಮನೆ, ತಂಬಾಕು, ಗಾಂಜ, ಷರಾಬು, ಉಪ್ಪಿನಮೋಳೆ, ಆಚಾರಗಾಣಿಕೆ ಇವೇ ಮೊದಲಾದವುಗಳು ಸೇರಿದ್ದವು. ಇದೂ ಅಲ್ಲದೆ, ಭಾರತದ ಹುಣ್ಣುಮೆಯಲ್ಲಿ ರಾಜಸಂಸಾರದವರು ಜೋಗಿವೇಷದಲ್ಲಿ ಹೊರಟಾಗ ಗ್ರಾಮದ ಗೌಡರು ಮುಂತಾದವರು ಕೊಡಬೇಕಾದ ಉಲುಪೆ ಮೊದಲಾದ ಚಿಲ್ಲರೆ ಬಾಬುಗಳೂ ಆದಾಯಕ್ಕೆ ಸೇರುತಿದ್ದುವು. ಈ ರಾಜರುಗಳು ಒಬ್ಬಳಿಗಿಂತಲೂ ಹೆಚ್ಚು ಜನ ಹೆಂಗಸರನ್ನು ಮದುವೆಯಾಗುತಿದ್ದರು. ಆಯಾ ದೊರೆಯು ತೀರಿಹೋದಕೂಡಲೆ ಜೀವಂತರಾಗಿರಲು ಇಷ್ಟವುಳ್ಳವರು ವಿನಾ ಉಳಿದವರೆಲ್ಲಾ ತಂತಮ್ಮ ಗಂಡಂದಿರೊಡನೆ ಸಹಗಮನಮಾಡಿಬಿಡುತಿದ್ದರು. ಇದು ತಮ್ಮ ಮನಃ ಪೂರ್ವಕವಾಗಿ ಆಯಾ ರಾಣಿಗಳು ಮಾಡುತಿದ್ದ ಕೆಲಸವಾಗಿತ್ತೇ ಹೊರತು ಯಾರಬಲವಂತಕ್ಕೂ ಮಾಡತಕ್ಕದ್ದಾಗಿರಲಿಲ್ಲವೆನ್ನುವುದಕ್ಕೆ ಕೆಲವು ರಾಣಿಗಳು ಜೀವಂತರಾಗಿ ಉಳಿದುಕೊಳ್ಳುತಿದದ್ದೇ ದೃಷ್ಟಾಂತವಾಗಿದೆ. ಆಯಾ ಪತಿವ್ರತೆಯರ ಮನೋ ನಿಶ್ಚಯವನ್ನರಿಯದವರು ಇದು ಒಂದು ಬಗೆಯಾದ ಕೊಲೆ ಎಂದು ಹೇಳಿಕೊಳ್ಳುವುದೇನೂ ಆಶ್ಚರ್ಯವಲ್ಲ. ದೊರೆಯನ್ನು ಮದುವೆಯಾಗಿ ಬೇಕಾದ ಸೌಖ್ಯವನ್ನು ಅನುಭವಿಸಿ, ಮಹಾಪದವಿಯ ಗೌರವವನ್ನು ಕಾಪಾಡಿಕೊಂಡಿದ್ದು, ಕೈ ಹಿಡಿದ ಪತಿಯು ಪರಂಧಾಮವನ್ನೈದಿದಮೇಲೆ ವೈಧವ್ಯದುಃಖಗಳಿಗೆ ಗುರಿಯಾಗಿ, ಇತರರ ಹಂಗಿನ ಕೂಳಿನಲ್ಲಿ ಜೀವಿಸುವುದಕ್ಕಿಂತಲೂ ತನ್ನ ಕೈಮೇಲಾಗಿರುವಾಗ ನಿರ್ವಾಣವನ್ನು ಹೊಂದುವುದು ಮೇಲಾದ್ದೆಂಬ ವ್ಯಾವಹಾರಿಕ ವೈರಾಗ್ಯದಿಂದಲೋ, ಅಥವಾ ಪತಿಲೋಕವನ್ನು ಹೊಂದಿ ತನ್ಮೂಲಕ ಮೋಕ್ಷಕ್ಕೆ ಭಾಗಿಯಾದೇನೆಂಬ ಆ ಮುಷ್ಮಿಕ ಸಂಬಂಧವಾದ ವೈರಾಗ್ಯದಿಂದಲೋ, ಗಂಡನದಾರಿಯನ್ನು ಹಿಡಿಯತಕ್ಕ ಪತಿವ್ರತೆಯರು ಲೋಕದಲ್ಲಿದ್ದರು. ಅಂಥವರು ಇಲ್ಲವೇ ಇಲ್ಲವೆಂದು ಹೇಳುವುದಕ್ಕೆ ಈ ಕಾಲದಲ್ಲಿಯೂ ಈಗೀಗಲೂ ಪತಿಗೆ ಪ್ರಾಣೋತ್ಕ್ರಮಣಕಾಲ ಪ್ರಾಪ್ತವಾಯಿತೆಂದು ಕೇಳಿದಕೂಡಲೆ ತಾವಾಗಿ ಪ್ರಾಣತ್ಯಾಗ ಮಾಡಿಕೊಂಡ ಪತಿವ್ರತೆಯರ ಚರಿತ್ರೆಯು ಅಡ್ಡಿಯಾಗಿದೆ.

ಈ ಚಿತ್ರದುರ್ಗದ ಪಾಳಯಗಾರರು ಸಾಧಾರಣ ಪುಂಡು ಪಾಳಯಗಾರರ ಹೋಲಿಕೆಯವರಲ್ಲ. ಈ ಎರಡು ಸಂತತಿಯಿಂದ ೨೧೧ ವರುಷ

ಗಳು ಆಳಿದರು. ಪ್ರತಿಯೊಬ್ಬ ದೊರೆಯೂ ಪರಾಕ್ರಮಶಾಲಿ. ಇವರೆಲ್ಲಾ ತಮ್ಮ ಪ್ರಾಣದ ಮೇಲೆ ಆಸೆಯನ್ನು ಬಿಟ್ಟು ಯುದ್ಧಮಾಡಿ ರಾಜ್ಯವನ್ನು ವಿಸ್ತರಿಸುತ್ತಲೇ ಇದ್ದರು. ಆಳಿಕೆ ಆಳಿಕೆಗೆ ಹಸ್ತಾಂತರದ ಸುವರ್ಣಾದಾಯ ಹೆಚ್ಚುತ್ತಲೇ ಬಂತು ಇವರು ಎಲ್ಲರೂ ಸ್ವತಃ ವಿವೇಕಿಗಳು. ಆಲೋಚನಪರರಾದ ಮಂತ್ರಿಗಳನ್ನು ಹತ್ತಿರ ಇರಿಸಿಕೊಂಡು ಅವರೊಡನೆ ಮಂತ್ರಾಲೋಚನೆಯನ್ನು ಮಾಡುತ್ತಲೇ ಇದ್ದರಲ್ಲದೆ ತಮ್ಮ ಪ್ರೌಢಿಮೆಯೇ ಹೆಸರುಗೊಳ್ಳಬೇಕು, ತಮ್ಮ ಹಠವೇ ಸಾಧನೆಯಾಗಬೇಕು ಎಂಬದಾಗಿ ಮುಷ್ಕರ ಮಾಡಿಕೊಂಡಿದ್ದರೆಂದು ಹೇಳುವುದಕ್ಕೆ ಯಾವ ಗುರುತೂ ಕಂಡು ಬರುವುದಿಲ್ಲ. ಇವರಲ್ಲಿ ದೈವಭಕ್ತಿಯೂ, ಮಹಾತ್ಮರ ಪ್ರಭಾವದಲ್ಲಿ ಭಕ್ತಿಯೂ ವಿಶೇಷವಾಗಿತ್ತು. ಇವರು ಅನೇಕ ದೇವಸ್ಥಾನಗಳನ್ನು ಕಟ್ಟಿಸಿದರು. ತಟಾಕ ಪ್ರತಿಷ್ಠೆಗಳನ್ನು ಮಾಡಿದರು. ಇವರಲ್ಲೆಲ್ಲಾ ಹಿರೀ ಮದಕರಿನಾಯಕನ ಆಸ್ತಿಕ್ಯವನ್ನೂ, ಕರ್ಮ ಶ್ರದ್ಧೆಯನ್ನೂ, ಪಾರಮಾರ್ಥಿಕತೆಯನ್ನೂ ಮೀರಿಸಿದವರು ಕಾಣಿಸಲಿಲ್ಲ. ಈ ರಾಜರ ಔದಾರ್ಯವೂ ದಯಾರಸವೂ ಲೇಖನದಲ್ಲಿ ಶಾಶ್ವತವಾಗಿ ಚಿತ್ರಿತವಾಗಲು ಯೋಗ್ಯವಾದವುಗಳಾಗಿವೆ. ಒಳ್ಳೇಸಮಾಚಾರವನ್ನು ತಂದು ಹೇಳಿದವರಿಗೆ ಅವರ ಬಾಯಿತುಂಬ ಹೊನ್ನನ್ನು ಹಾಕಿಸುತಿದ್ದರು. ದಾತೃವು ಕೊಡುತೇನೆಂದರೂ, ಪ್ರತಿಗ್ರಹೀತರು ಸಾಕು, ಒಲ್ಲೆನೆಂದು ಹೇಳುವವಷ್ಟಿನ ಧಾರಾಳವು ಈ ಅರಸುಗಳಲ್ಲಿತ್ತು. ಧಣಿಯ ಅಪ್ಪಣೆಯಂತೆ ಭೃತ್ಯರು ಯಾವ ಕಾರ್ಯವನ್ನು ನಿರ್ವಾಹ ಮಾಡಿದಾಗ್ಯೂ, ಕಡೆ ತೋಡೆ, ಷಾಲ್‌ಜೋಡಿ ಮೊದಲಾದ ಇನಾಮುಗಳು ತಪ್ಪುತಿರಲಿಲ್ಲ. ಯುದ್ಧರಂಗದಲ್ಲಿ ಕೂಡ ಶತ್ರುಗಳನ್ನು ಕೊಂದವರಿಗೆ ತಲೆ ಒಂದಕ್ಕೆ ೧೦೦,೨೦೦ ಇನಾಮೆಂದು ಕರಣೀಕರ ಕೈಯಲ್ಲಿ ಲೆಕ್ಕಾಬರೆಯಿಸಿ ಬಹುಮಾನವನ್ನು ಕೊಡುತಿದ್ದರು. ಯಾವಾಗ ಯುದ್ಧಪ್ರಸಕ್ತಿ ಬಂದರೂ ನಿಮ್ಮನ್ನು ಬಿಟ್ಟುಕೊಡುವುದಿಲ್ಲ, ಎಂದು ಪ್ರಜೆಗಳೂ ಉದ್ಯೋಗಸ್ಥರೂ ಹೇಳುವಷ್ಟು ಸ್ವಾಮಿಭಕ್ತಿ ಅವರಲ್ಲಿತ್ತು. ಅನೇಕ ಸದ್ಗುಣಗಳು ಈರಾಜರಲ್ಲಿದ್ದುದರಿಂದ ತುರುಕರು, ಮರಾಟೆಯವರು, ರಾಜಪೂತರು, ಪೂರಭಯ್ಯಾಜನರು, ರೋಹಿಲೆಯವರು, ಬೇಡರು ಮುಂತಾದ ಶೂರರು, ತಾವು ತಾವಾಗಿಬಂದು ಪಾಳಯಗಾರರ ಸೇನೆಯಲ್ಲಿ ಉದ್ಯೋಗಮಾಡಿಕೊಂಡಿದ್ದರು,

ಈ ಸೀಮೆಯ ಜನರೇ ಅಲ್ಲದೆ ದ್ವೀಪಾಂತರದ ಜನರೂ ಬಂದು ಈ ದೊರೆಗಳಲ್ಲಿ ಆಶ್ರಯವನ್ನು ಹೊಂದಿ, ತಂತಮ್ಮ ಯೋಗ್ಯತೆಗಳನ್ನು ತೋರ್ಪಡಿಸಿ ಕಷ್ಟತರವಾದ ಕೆಲಸಗಳನ್ನು ಮಾಡಿದಾರೆ. ಫರಂಗಿ ಜಾನ ಎಂಬುವನು ಈ ದೊರೆಗಳಲ್ಲಿ ಚಾಕರಿ ಇದ್ದನು. ಇವನು ಉಚ್ಚಂಗಮ್ಮನ ಉಯ್ಯಾಲೆ ಕಂಬ, ದೀಪಮಾಲೆಕಂಬ, ಇವುಗಳನ್ನು ತನ್ನ ಸಾಹಸದಿಂದಲೂ ಯುಕ್ತಿಯಿಂದಲೂ ಬಂದು ದಿವಸದಲ್ಲಿ ನಿಲ್ಲಿಸಿದನು. ಈ ಜಾನನೆಂಬುವನು ಫ್ರಾನ್ಸುದೇಶದವನಾಗಿರಬಹುದು ಎಂದು ತೋರುತ್ತೆ. ಹೊಸದುರ್ಗದ ತಾಲ್ಲೋಕಿನಲ್ಲಿರುವ ಜಾನಕಲ್ ಎಂಬ ಬಲವಾದ ಕೋಟೆಯನ್ನು ಈ ಜಾನನೇ ಕಟ್ಟಿಸಿದನೆ, ಇದರಿಂದ ಜಾನಕಲ್ ಎಂದು ಹೆಸರಾಯಿತೆ, ಗೊತ್ತಾಗಲಿಲ್ಲ ಜಾನಕೊಂಡವೆಂಬ ಗ್ರಾಮಕ್ಕೆ ಹೇಗೆ ಹೆಸರುಬಂದಿತು ?

ಮೊಗಲಾಯಿ ಸುಬೇದಾರರು, ಮರಾಟೆಯವರು ಮತ್ತು ಈ ಕಾಮಗೇತಿ ವಂಶದ ದೊರೆಗಳ ಏಳಿಗೆಯನ್ನು ನೋಡಿ ಅಸೂಯಪಡುತಾಇದ್ದ ನೆರೆಪಾಳಯಗಾರರು, ಇವರೇ ಮೊದಲಾದವರ ಕಾಟಕಾಯಗಳು ಪದೇ ಪದೇ ಸಂಭವಿಸುತ್ತಲೇ ಇದ್ದವು ಯಾವ ದೊರೆಯ ಆಳಿಕೆಯಲ್ಲಿಯೂ ಯುದ್ಧವಿಲ್ಲದೆ ಸಮಾಧಾನವಾದ ಸ್ಥಿತಿ ಇರುತಿರಲಿಲ್ಲ. ಇದ್ದ ರಾಜ್ಯದ ಗಡಿಗಳು ಶತ್ರುಗಳ ಕೈಗೆ ಸಿಕ್ಕುವುದು, ಅಥವಾ ಶತ್ರುರಾಜರ ಸೀಮೆಗಳು ದುರ್ಗದವರ ವಶವಾಗುವುದು ಯಾವಾಗಲೂ ಜರುಗುತ್ತಲೇ ಇತ್ತು. ಇಂಥಾ ಯುದ್ಧ ಪ್ರಮೇಯಕ್ಕಾಗಿ ಚಿತ್ರದುರ್ಗದ ಪಾಳಯಗಾರರು ಯಾವಾಗಲೂ ಹೆಚ್ಚಾದ ಸೇನೆಯನ್ನು ಜಗಳಕ್ಕೆ ಸಿದ್ಧವಾಗಿರಿಸಿಕೊಂಡಿರಲೇಬೇಕಾಗಿತ್ತು. ಇವರು ಕದನಗಳಲ್ಲಿಯೂ, ಕೋಟೆಗಳ ಮುತ್ತಿಗೆಯಲ್ಲಿಯೂ, ಪುರಾತನ ಪದ್ಧತಿಪ್ರಕಾರ ಅಂಬು ಬಿಲ್ಲುಗಳನ್ನು ಉಪಯೋಗಿಸುತಿದ್ದರು. ಫಿರಂಗಿ ಮತ್ತು ತುಪಾಕಿಗಳನ್ನು ಹಾರಿಸುವುದು, ಸುರಂಗಹಾಕಿ ಕೋಟೆಗಳನ್ನು ಹಾರಿಸುವುದು, ಕೋಟೆಗೋಡೆಗೆ ಸರಿಯಾಗಿ ಮೊಹರ್ಚೆ ಕಟ್ಟಿ ಫಿರಂಗಿಗಳನ್ನು ಹಾರಿಸುವುದು, ಉಡುಗಳನ್ನು ಹಾಕಿ ಹಲ್ಲಾ ಹತ್ತುವುದು, ಇವೆಲ್ಲಾ ಕದನಗಳಲ್ಲಿ ವಾಡಿಕೆಯಾಗಿ ಉಪಯೋಗದಲ್ಲಿದ್ದವು. ದಂಡಿನವರ ತಿಳುವಳಿ

ಕೆಗೆ ಕೂಚು ನಗಾರಿ, ಧರ್ಮಕಹಳೆ, ಮೊದಲಾದ್ದನ್ನು ಉಪಯೋಗಿಸುತಿದ್ದಂತೆ ತಿಳಿಯಬರುವ ಸಂಗತಿಯು ಈ ಪಾಳಯಗಾರರ ಸೇನೆಯಲ್ಲಿ ಒಂದು ವಿಧವಾದ ತರಬಿಯತ್ತು ಇತ್ತೆಂದು ತೋರಿಸುವುದು

ಸೇನೆಯವರಿಗೆ ಇನಾಮು ಮೊದಲಾದ್ದನ್ನು ಕೊಡುವುದು, ಸೇನೆಗೆ ಜನರನ್ನು ಆಕರ್ಷಣೆಮಾಡುವುದಕ್ಕೆ ಒಂದೇಮಾರ್ಗವಲ್ಲ ಯುದ್ಧದ ವೀರರಮಕ್ಕಳು ತಬ್ಬಲಿಗಳಾಗಲು ಅವರ ಸಂರಕ್ಷಣೆಗಾಗಿ ಹಾಲು, ಬೆಂಣೆ ಹಣವೆಂದು ಬಾಲ್ಯಾವಸ್ಥೆ ತೀರುವತನಕ ಸಂಬಳದ ಹಾಗೆ ಕೊಡುತ್ತಾ ಅವರು ದೊಡ್ಡವರಾದಮೇಲೆ ಸೇನೆಯಲ್ಲಿ ಅವರಿಗೆ ಚಾಕರಿಯನ್ನು ಕೊಟ್ಟು ಇರಿಸಿಕೊಳ್ಳುತಾ ಇದ್ದರು. ಇಂಥಾ ಸಿಪಾಯಿಗಳು ಯುದ್ಧ ಕಾಲದಲ್ಲಿ ಓಡಿಹೋದರೆ ಅವರನ್ನು ಹಿಡಿಯಿಸಿ ಹೀಗೆ ಹೇಡಿಗಳಾದ ಇತರ ಸಿಪಾಯಿಗಳಿಗೆ ಕೊಡುವದಕ್ಕಿಂತಲೂ ಹೆಚ್ಚಾದ ಶಿಕ್ಷೆಯನ್ನು ಕೊಡುತಿದ್ದರು. ಈ ಕಾರಣದಿಂದ ಇಂಥಾ ಭಟರು ಯಾವಾಗಲೂ ದೊರೆಗೆ ಕೃತಜ್ಞರಾಗಿರುತಾ ಪ್ರಾಣವನ್ನು ಒಪ್ಪಿಸಲು ಸಿದ್ಧವಾಗಿರುತಿದ್ದರು. ಇಂಥಾ ಪದ್ಧತಿಯು ಈಗಿನ ಕಾಲದ ರಾಜರಿಂದ ಕೂಡ ಅನುಸರಿಸಲ್ಪಡುವದಕ್ಕೆ ಯೋಗ್ಯವಾಗಿದೆ.

ಈ ಪ್ರಕಾರ ಸೇನೆಯವರಿಗೆ ವಿಶೇಷವಾಗಿ ಕೊಡುತಿದ್ದ ಪ್ರೋತ್ಸಾಹವು ಅವರ ಕೊಬ್ಬನ್ನು ಹೆಚ್ಚಿಸಿತು. ಇಮ್ಮಡಿ ಮದಕರಿನಾಯಕ ಸತ್ತುಹೋದಮೇಲೆ ದಂಡಿನವರು ತಿರುಗಿಬಿದ್ದು ಓಬಂಣನೆಂಬ ಒಬ್ಬ ಚಿಕ್ಕ ದೊರೆಯನ್ನು ಹಿಡಿದು ಬಹಿರಂಗವಾಗಿ ಕೊಂದುಹಾಕಿದರು. ರಾಜ್ಯಭಾರವೆಲ್ಲಾ ಅಲ್ಲೋಲಕಲ್ಲೋಲವಾಯಿತು. ಪುನಃ ಕೆಲವು ವರುಷದ ತರುವಾಯ ಶ॥ ೧೬೦೮ರಲ್ಲಿ ೩ನೇ ಮದಕರಿನಾಯಕನೆಂಬವನಿಗೆ ಪಟ್ಟವಾಗಲು, ಪುನಃ ಎಪ್ಪರು ಕಕ್ಷಿಯ ದಳವಾಯಿಗಳೆಲ್ಲಾ ಸೇರಿ ಆ ಮದಕರಿನಾಯಕನೆಂಬ ದೊರೆಯನ್ನು ಕೈಸೆರೆ ಹಿಡಿದು ಸೆರೆಮನೆಯಲ್ಲಿ ಅವನ ಪ್ರಾಣವನ್ನು ತೆಗೆದರು. ದಂಡಿನವರ ಏಳಿಗೆ ಅತಿಯಾದ್ದರಿಂದ ಇಂಥಾ ಅವಾಂತರಗಳು ನಡೆದವು.

ಸಂತತವಾದ ಯುದ್ಧಪ್ರಮೇಯಗಳಿಂದ ಶ॥ ೧೬೪೮ನೇ ಪರಾಭವ ಸಂ॥ ದಲ್ಲಿ ಭರಮಪ್ಪನಾಯಕನ ಆಳಿಕೆಯಲ್ಲಿ ವೀರಕ್ಷಾಮ ಪ್ರಾಪ್ತವಾ

ಯಿತು. ಇದಕ್ಕೆ ಪೆಂಕೆ ಬರವೆನ್ನುತಾರೆ. ಹೀಗೆಯೇ ಶ|| ೧೬೫೪ನೇ ಪರೀಧಾವಿ ಸಂ|| ದಲ್ಲಿಯೂ ಬರಬಿದ್ದು ಬಹು ಜನ ಲಯುವಾಯಿತು. ಶ|| ೧೬೬೩ನೇ ದುರ್ಮತಿ ಸಂ|| ಆಶ್ವೀಜ ಶುದ್ಧ ೧೦ಯಿಂದ ಕಾರ್ತೀಕ ಶು|| ೫ ವರೆಗೆ ಹುಚ್ಚುಮಳೆ ಹೂಯಿತು. ಅದೇ ಭರಮಪ್ಪನಾಯಕನ ಆಳಿಕೆಯಲ್ಲಿ ಕ್ರಿ. ಶ|| ೧೭೦೩-೪ ರಲ್ಲಿಗುಳ್ಳೆರೋಗ ಪ್ರಾಪ್ತವಾಯಿತು. ಈ ದೈವಿಕಗಳಿಂದ ಅನೇಕ ಜನ ಲಯುವಾಯಿತು.

ಯುಗಾಂತರದಲ್ಲಿ ನಡೆಯುತಾ ಇದ್ದ ಹಾಗೆಯೇ ದೊರೆಯು ಚಂದ್ರಾಯುಧವನ್ನು ದೊರೆಗೆ ಬವಲಾಗಿ ಕೂರಿಸಿ ಮದುವೆಮಾಡಿಕೊಡುವ ಪದ್ಧತಿಯು ಚಿಕ್ಕಂಣನಾಯುಕನ ಆಳಿಕೆವರೆಗೆ ನಡೆದು ಬಂತೆಂದು ತಿಳಿಯ ಬಂದಿದೆ.

ಈ ಪಾಳಯಗಾರರ ಆಳಿಕೆಗಳಲ್ಲಿ ಗ್ರಾಮಗಳ ಬಾರಾಬಲೂತಿ ಕೆಲಸದವರಿಗೆ ಮಾನ್ಯ ಮಿರಾಸಿ ಮೊದಲಾದ ಆಗತೆಗಳನ್ನುಂಟುಮಾಡಿ ಕೊಟ್ಟು, ಖಂಡಿತವಾಗಿ ಸರ್ಕಾರದಿಂದ ನೇಮಕಮಾಡಿದ ವಿವರ ಹೇಗಂದರೆ:—

| ನಿಜ ಆಯುಗಾರರು. | ಅರೆ ಆಯುಗಾರರು. |
|---|---|
| ೧ ಗೌಡ. | ೧ ಜೋಯಿಸ. |
| ೧ ಶಾನುಭೋಗ. | ೧ ಕುಲಾಲ (ಕುಂಬಾರ). |
| ೧ ಬಡಗಿ. | ೧ ನಾಪಿತ (ಕ್ಷೌರದವನು). |
| ೧ ಕಮ್ಮಾರ. | ೧ ರಜಕ (ಅಗಸ). |
| ೧ ತಳವಾರ. | ೧ ಬಾರಿಕ (ನೀರಗಂಟಿ). |
| ೧ ಬೇಗಾರ. | ೧ ಅಕಸಾಲೆ. |

ಈ ದೊರೆಗಳಿಗೆ ಬ್ರಾಹ್ಮಣರು ಯಾವಾಗಲೂ ಪ್ರಧಾನಿಗಳಾಗಿರುತಿದ್ದರು. ಮಂತ್ರಾಲೋಚನ ಸಭೆ ಎಂಬ ಮರ್ಜಸಬ್‌ದಾರರೂ ಸಹಾ ಇರುತಿದ್ದರು. ರಾಜನ ಸಮೀಪಸಂಬಂಧಿಗಳಿಗೆ ದಂಡಿನಲ್ಲಿಯೂ ಗಡಿ ದುರ್ಗಗಳಲ್ಲಿಯೂ ಭಾರಿಯಾದ ಹುದ್ದೆಗಳನ್ನು ಕೊಟ್ಟು ಸ್ಥಳಾಂತರಗಳಿಗೆ ಕಳುಹಿಸುತಿದ್ದರು.

ಈ ರಾಜರ ಸುಗುಣಗಳ ದೆಸೆಯಿಂದ ಪ್ರಜೆಗಳೆಲ್ಲಾ ಸಂತುಷ್ಟರಾಗಿರುತಿದ್ದರು. ಹೈದರಲ್ಲಿಯ ಸಂಗಡ ಯುದ್ಧ ತೊಡಗಿದ ಕಾಲದಲ್ಲಿ ಮದಕರಿನಾಯಕನು ಮುಖಂಡರಾದ ಜನರನ್ನು ಕರೆಯಿಸಿ ಒದಗಿರುವ ರಾಜಕಾರ್ಯವನ್ನು ವಿವರಿಸಿ ಹೇಳಲಾಗಿ, ಒಂದುವರುಷದವರೆಗೂ ಆಗುವ ಯುದ್ಧದ ವೆಚ್ಚವನ್ನು ಪ್ರಜೆಗಳಾದ ತಾವೆಲ್ಲರೂ ಸೇರಿಕೊಡುವುದಾಗಿ ಆ ಪ್ರಮುಖರು ಅರಿಕೆಮಾಡಿದರು.

ಈ ರಾಜರೆಲ್ಲರೂ ಮೊದಲಿನಿಂದಲೂ ಬ್ರಾಹ್ಮಣ ಮತಾವಲಂಬಿಗಳು. ಶ|| ೧೬೦೦ನೇ ಕಾಳಯುಕ್ತಿ ಸಂ|| ದಲ್ಲಿ ದೊರೆಯೂ ರಾಜನ ಮನೆತನದವರೂ ಸಹಾ ಶಿವದೀಕ್ಷೆಯನ್ನು ತೆಗೆದುಕೊಂಡು ಲಿಂಗಾಕಟ್ಟಿಕೊಂಡರು. ಕಡೆಗೆ ಇದು ಸರಿಬೀಳದೆ ಹೋದಕಾರಣ ಇವರು ಕೆಲವು ತಿಂಗಳಲ್ಲಿಯೇ ಲಿಂಗವನ್ನು ತೆಗೆದುಹಾಕಿಬಿಟ್ಟರು.

ಸಾಧಾರಣವಾಗಿ ಈ ದೊರೆಗಳೆಲ್ಲರೂ ಶೂರರು. ಯಾವ ದೊರೆಯ ಆಳಿಕೆಯಲ್ಲಿಯೂ ಹೊರಗಿನ ಶತ್ರುಗಳೊಡನೆ ಯುದ್ಧವಿಲ್ಲದೆ ಇರುತಿರಲಿಲ್ಲ. ಯಾವಪಾಳಯಗಾರನ ದಿವಸದಲ್ಲಿಯೂ ಹೊಸದಾಗಿ ರಾಜ್ಯವನ್ನು ಜೈಸದೆ ಇರಲಿಲ್ಲ ಇವರು ಯುದ್ಧಕಾಲದ ವೀರಾವೇಶದಲ್ಲಿ ಹೊರತು ಉಳಿದವೆಲ್ಲಾ ಕಾಲಗಳಲ್ಲಿಯೂ ದಯಾರಸ ಉಳ್ಳವರು, ಪಾಪಭೀತರು, ಪ್ರಜಾರಂಜಕರು. ದೊರೆತನ ಬದಲಾಯಿಸಬೇಕಾದಾಗಲೂ ಭಾರಿಯಾಗಿ ಯುದ್ಧ ಪ್ರಮೇಯ ಬಿದ್ದಾಗಲೂ, ಮಂತ್ರಿಗಳ ಮತ್ತು ಪ್ರಜೆಗಳ ಅನುಮತಿಯನ್ನು ಕೇಳಿ ಕೆಲಸಗಳನ್ನು ಜರುಗಿಸುತಿದ್ದರು.

ಈ ಸಂಸ್ಥಾನವು ಬಹು ಬಲವಾದ್ದು, ಫಿತೂರಿಯೂ ದ್ರೋಹಿತನವೂ ಇಲ್ಲದಿದ್ದರೆ ಹೈದರನಿಗೂ ಜೈಸಲಸಾಧ್ಯವಾದ್ದು. ಕ್ರಿ. ಶ|| ೧೭೭೯ ರಲ್ಲಿ ಈ ಸಂಸ್ಥಾನ ಹೋಯಿತು. ಆಗ ಈ ರಾಜ್ಯಹೋಗದೆ ಇನ್ನು ಮೂರು ವರುಷ ಮಾತ್ರ ತಡವಾಗಿದ್ದರೆ ಈ ಪಾಳಯಪಟ್ಟು ಸ್ಥಿರವಾಗಿನಿಲ್ಲುವ ಸಂಭವವಿದ್ದರೂ ಇರಬಹುದಾಗಿತ್ತು. ಸನ್ ೧೭೮೦ ರಲ್ಲಿ ಹೈದರಲ್ಲಿಯೂ ಸತ್ತುಹೋದನು. ಅವನ ಮಗನಾದ ಟೀಪ್ಪುಸುಲ್ತಾನನಿಗೆ ಇಂಗ್ಲಿಷರು, ಮರಾಟೆಯವರು ಮೊದಲಾದ ಹೊರ ಶತ್ರುಗಳಲ್ಲಿಯೂ ಅಲ್ಲದೆ ಒಳದೇಶದ ಶತ್ರುಗಳಲ್ಲಿ ಕೂಡ ಇದ್ದ ವೈಷಮ್ಯವು

ಇತರ ಸಂಸ್ಥಾನಗಳ ಮೇಲೆ ದಂಡೆತ್ತಿಹೋಗಿ ಜಯವನ್ನು ಹೊಂದುವ ಮಟ್ಟಿನ ಅವಕಾಶವನ್ನು ಕೊಟ್ಟಿರಲಿಲ್ಲ. ಆದಕಾರಣ ಈ ಸಂಸ್ಥಾನವು ಉಳಿದುಕೊಳ್ಳುವ ಸಂಭವ ಇತ್ತೆ? ಇದಕ್ಕಿಂತಲೂ ಚಿಕ್ಕದಾಗಿರುವ ಎಷ್ಟೋ ರಾಜಪುತ್ರ ಸಂಸ್ಥಾನಗಳು ಉಳಿದುಕೊಂಡಂತೆಯೇ ದುರ್ಗದ ಸಂಸ್ಥಾನವೂ ನಿರಂತರವಾಗಿ ನಿಲ್ಲುತ್ತಿತ್ತೆ? ಇದನ್ನು ಈಗ ಖಂಡಿತವಾಗಿ ನಿರ್ಧರಿಸಿ ಹೇಳಲು ಸಾಧ್ಯವಿಲ್ಲ. ಒಂದುವೇಳೆ ದುರ್ಗದವರ ಸಹಾಯಕ್ಕೆಂದು ಬಂದ ಮರಾಟೆ ಸರದಾರರು ಹೈದರಲ್ಲಿಯ ಲಂಚಕ್ಕೆ ಕೈ ಒಡ್ಡದೆ ಮದಕರಿನಾಯಕನ ಸ್ನೇಹವನ್ನು ಬಲಮಾಡಿಕೊಂಡಿದ್ದಲ್ಲಿ, ಪೇಶ್ವೆಯ ಕಕ್ಷಿ ದಕ್ಷಿಣದೇಶದಲ್ಲಿ ಕೇವಲ ಬಲವಾಗಿ ಟೀಪುಸುಲ್ತಾನನನ್ನು ಮೂಲೋತ್ಪಾಟನ ಮಾಡುತಿದ್ದ ಅಂಶವು ಸಂಶಯದಿಂದ ವಿಶೇಷವಾಗಿ ಬಾಧಿತವಾಗಿಲ್ಲ. ಹಾಗಾಗಿದ್ದಲ್ಲಿ ಚರಿತ್ರೆಯ ಬಳ್ಳಿಯು ಹೇಗೆ ತಿರುಗಿಕೊಳ್ಳುತಿತ್ತೆಂದು ಈಗ ಹೇಳಲು ಕಷ್ಟವಾಗಿದೆ.

. ಈ ದೊರೆಗಳು ಅನೇಕ ಗ್ರಾಮಗಳನ್ನು ಜೀರ್ಣೋದ್ಧಾರಮಾಡಿ ಅನೇಕ ಗ್ರಾಮಗಳನ್ನು ಹೊಸದಾಗಿ ಕಟ್ಟಿಸಿದರು. ಕೆಲವು ಗ್ರಾಮಗಳಿಗೆ ರಾಜನ ಮನೆತನದ ಹೆಂಗಸರ ಹೆಸರನ್ನು ಇಟ್ಟರು ಹೇಗೆಂದರೆ, ಸಿದ್ದವ್ವನ ಹಳ್ಳಿ, ಸಿದ್ದವ್ವನ ದುರ್ಗ, ರಂಗವ್ವನಹಳ್ಳಿ, ವೀರವ್ವನಾಗತಿ ಹಳ್ಳಿ, ಓಬವ್ವನಾಗತಿ ಹಳ್ಳಿ, ಮೊದಲಾದವು.

ದೊರೆಯ ಹೆಂಡತಿಯರಿಗೆ ನಾಯಕಿತಿ, ಅಥವಾ ನಾಗತಿ ಎಂದು ಹೆಸರು.

ಇತರ ಸಂಗತಿಗಳನ್ನು ಆಯಾ ಸ್ಥಳಗಳಲ್ಲಿ ಸಂದರ್ಭಾನುಸಾರವಾಗಿ ಬರೆದಿದೆ.

# ವಿಷಯ ಸೂಚಿಕೆ.

ಶ್ರೀ

ಶ್ರೀಲಕ್ಷ್ಮೀನರಸಿಂಹಾಯನಮಃ

# ಚಿತ್ರದುರ್ಗದ

# ಪಾಳಯಗಾರರು

## ೧ ನೇ ಅಧ್ಯಾಯ.

### ಪೂರ್ವದ ಕಥೆ.

ಹೆಸರು.

ಚಿತ್ರದುರ್ಗಕ್ಕೆ ಚಿನ್ಮೂಲಗಿರಿದುರ್ಗವೆಂದು ಒಂದು ಹೆಸರಿಟ್ಟಿದಾರೆ. ಸ್ಥಳಕ್ಕೆ ವಿಶೇಷವಾಗಿ ಪ್ರಾಶಸ್ತ್ಯ ಉಂಟಾಗಲೆಂದು ಸಂಸ್ಕೃತ ವಿದ್ವಾಂಸರು ಯಾರೋ ಆವೂರಿಗೆ ಈ ನಾಮಕರಣವನ್ನು ಮಾಡಿದ್ದರೂ ಇರಬಹುದು. ಬೇಡರು ತಮ್ಮ ಚಿತ್ರ ದೇವರ ಹೆಸರನ್ನು ಇದಕ್ಕೆ ಇಟ್ಟರೆಂತಲೂ ಜನವಾರ್ತೆ ಇದೆ. ಪ್ರಾಯೇಣ ಹೀಗಿದ್ದರೂ ಇರಬಹುದೆಂದು ನಂಬುವುದಕ್ಕೆ ಹೆಸರಿನ ಹೋಲಿಕೆಯಿಂದ ಕಾರಣಕಂಡುಬರುವುದು. ಇದರ ಪುರಾತನವಾದ ಹೆಸರು ಬೆಮ್ಮಚ್ಚನೂರು, ಅಥವಾ ಬೆಮ್ಮತ್ತನೂರು ಎಂದು ಇದ್ದಹಾಗೆ ತಿಳಿಯ ಬರುವುದು. (ರೈಸ್ ಸಾಹೇಬರ ಮೈಸೂರು ಶಾಸನಗಳಲ್ಲಿ ಚಿತ್ರದುರ್ಗವೆಂಬ ಸಂಪುಟದ ೩೪ನೇ ಶಾಸನವನ್ನು ನೋಡಬಹುದು.)

ಸ್ಥಳಪುರಾಣ.

ದ್ವಾಪರಯುಗದಲ್ಲಿ ಕೌರವರು ದಾಯಾದಮತ್ಸರದಿಂದ ಪಾಂಡವರನ್ನು ಲಾಕ್ಷಾ ಗೃಹಪ್ರವೇಶ ಮಾಡಿಸಿದಕಾಲದಲ್ಲಿ, ಭೀಮನು ಕುಂತೀಯುಕ್ತನಾಗಿ ಐದು ಮಂದಿಯನ್ನು ಹೊತ್ತುಕೊಂಡು ರಾತ್ರಿವೇಳೆಯಲ್ಲಿ ಹೊರಟುಹೋಗುತಾ ದಾರಿಯಲ್ಲಿ ಹಿಡಿಂಬಾಶ್ರಮವೆಂಬ ಈ ಪರ್ವತವನ್ನು ಸೇರಿದನಂತೆ. ಆಗ ಹಿಡಿಂ

ಬಾಸುರನು ಈ ಪಾಂಡವರನ್ನು ತಿನ್ನಬೇಕೆಂದು ಬಂದನು. ಭೀಮಸೇನನು ಈ ಅಸುರನೊಡನೆ ಕಾಳಗವನ್ನು ಮಾಡಿ, ಅವನನ್ನು ಗುದ್ದಿ ಸಂಹಾರಮಾಡಿ ಅವನ ಹಲ್ಲುಗಳನ್ನು ಕಿತ್ತುಬಿಟ್ಟನು. ತರುವಾಯ ಪಾಂಡವರು ಬೆಟ್ಟಕ್ಕೆ ಸಮೀಪದಲ್ಲಿ ಇಳಿದುಕೊಂಡರು. ಆ ಸ್ಥಳಕ್ಕೆ ಪಂಡರಹಳ್ಳಿ ಎಂದು ಹೆಸರಾಯಿತಂತೆ. ತರುವಾಯ ಈ ಗುಡ್ಡಕ್ಕೆ ಸೇರಿದ ಹುಲೀಗೊಂದಿ ಎಂಬ ಸ್ಥಳದಲ್ಲಿ ಪಾಂಡವರು ಪಂಚಲಿಂಗಗಳನ್ನು ಪ್ರತಿಷ್ಠೆ ಮಾಡಿದರಂತೆ. ಈಗಲೂ ಆ ಸ್ಥಳದಲ್ಲಿ ಐದು ದೇವಸ್ಥಾನಗಳೂ ಅಲ್ಲಿ ಧರ್ಮೇಶ್ವರ, ಭೀಮೇಶ್ವರ, ಫಲ್ಗುಣೇಶ್ವರ, ನಕುಲೇಶ್ವರ, ದೇವೇಶ್ವರ ಎಂದು ಹೆಸರುಳ್ಳ ಐದು ಲಿಂಗಗಳೂ ಪ್ರತಿಷ್ಠೆಯಾಗಿವೆ. (ರೈಸ್‌ಸಾಹೇಬರ ಚಿತ್ರದುರ್ಗದಶಾಸನ ಸಂಖ್ಯೆ ೪೨ನ್ನು ನೋಡಬೇಕು,

ಜನಮೇಜಯರಾಯ ನಕಾಲ.

ಪಾಂಡವರ ಮರಿಮಗನಾದ ಜನಮೇಜಯ ರಾಯನು ತಮ್ಮ ಹಿರಿಯರಿಗೆ ಪುಣ್ಯಬರಲೆಂದು ಗೋಪಾಲದೇವರ ಗುಡಿಯನ್ನು ಕಟ್ಟಿಸಿ ದೇವರ ಪ್ರತಿಷ್ಠೆಮಾಡಿದನಂತೆ. ಈ ದೇವರಿಗೆ ಅಮೃತಪಡಿ ನಂದಾದೀವಿಗೆ ಮುಂತಾದ ವಿನಿಯೋಗಕ್ಕೆ ಅಗ್ರಹಾರವಾಗಿ ಗೋಪಾಲಪುರ ಗ್ರಾಮವನ್ನು ಧಾರಾಪೂರ್ವಕವಾಗಿ ಈಚೆಗೆ ಕೊಟ್ಟದಾರೆ. ಇದರ ಶಿಲಾಶಾಸನವು ಶೃಂಗಾರ ತೋಟದಲ್ಲಿದೆ. (ರೈಸ್‌ಸಾಹೇಬರ ಚಿತ್ರದುರ್ಗದ ಶಾಸನ ಸಂಖ್ಯೆ ೬ನ್ನು ನೋಡಬೇಕು.) ಇದು ವೀರ ಬಲ್ಲಾಳರಾಯನ ಪ್ರಧಾನಿ ರಾಮಯ್ಯ ಡಣಾಯಕನ ಮಗ ಹಿರಿಯಬಲ್ಲಪ್ಪ ಡಣಾಯಕನು ಶ॥ ೧೨೬೦ ಬಹುಧಾನ್ಯದಲ್ಲಿ ಕೊಟ್ಟದ್ದು. (ಮತ್ತು ಹುಲಿಗೊಂದಿ ಗ್ರಾಮ ಶಾಸನ ಸಂಖ್ಯೆ ೩೦ ನ್ನುನೋಡಿ). ಈಚೆಗೆ ವಿಕ್ರಮ ಶಕ ೨೩ರಲ್ಲಿ *ಗೋವಿಂದ ದಂಡಾಧಿಪನೆಂಬ ರಾಜನು ಇಲ್ಲಿ ಆಳುತಿದ್ದಹಾಗೆ ತಿಳಿಯಬಂದಿದೆ.

ತರುವಾಯ ಈ ದೇಶದಲ್ಲಿ ಬಿಜ್ಜಳ ಕಾಲಭೂರ್ಯರೂ, ಚೋಳರಾಜರೂ ಆಳಿದರು. ಚಿತ್ರದುರ್ಗದಲ್ಲಿರುವ ಚೋಳೇಶ್ವರನ ದೇವಸ್ಥಾನ, ಬೆಂಡೋಣೇಶ್ವರನ ಗುಡಿ, ಜಂಬುಕೇಶ್ವರನ ಗುಡಿ ಇವು

---

*ಲೆಕ್ಕಾಚಾರ ನೋಡಲಾಗಿ ಇದು ಉಜ್ಜಯನಿ ವಿಕ್ರಮ ಶಕೆಯಾಗಿ ಕಂಡು ಬರುವುದಿಲ್ಲ. ಪ್ರಾಯಶಃ ಚಾಳುಕ್ಯ ವಿಕ್ರಮ ಇರಬಹುದೆಂದು ತೋರುತ್ತೆ.

ಗಳನ್ನು ಕಟ್ಟಿಸಿದರು. (ರೈಸ್ ಸಾಹೇಬರ ಚಿತ್ರದುರ್ಗ ಶಾಸನ ಸಂಖ್ಯೆ ೩೪.)

ಈಚಿನ ದೊರೆಗಳ ಕಾಲ.

ವೀರಮಲ್ಲಂಣ ಒಡೆಯನು, ೧ ಸಂಪಿಗೇ ಸಿದ್ಧೇಶ್ವರನ ಗುಡಿ, ೨ ದೊಡ್ಡಮಲ್ಲೇಶ್ವರನ ಗುಡಿ, ೩ ಚಿಕ್ಕಮಲ್ಲೇಶ್ವರನ ಗುಡಿ, ಮುಂತಾದ್ದನ್ನು ಕಟ್ಟಿಸಿ, ಇವುಗಳ ಪಡಿತರ ದೀಪಾರಾಧನೆಗೆ ೧ ಮುಸಂಡಿಹಾಳು ೨ ಚಿಕ್ಕಪುರ, ಈ ಎರಡು ಗ್ರಾಮಗಳನ್ನು ಕೊಟ್ಟನು. ಇದಕ್ಕೆ ಶಿಲಾಶಾಸನ ಬರೆಯಿಸಿಕೊಟ್ಟಿದಾರೆ. (ರೈಸ್ ಸಾಹೇಬರ ಚಿತ್ರದುರ್ಗದ ೧೪ನೇ ಸಂಖ್ಯೆ ಶಾಸನವನ್ನು ನೋಡಿ). ಈ ವೀರಮಲ್ಲಂಣನ ಕಾಲದಲ್ಲಿ ಚಿತ್ರದುರ್ಗದ ಏಕನಾಥಮ್ಮನ ಗುಡಿಯನ್ನು ಕಟ್ಟಿಸಿದರು. ಈ ವೀರಮಲ್ಲಂಣ ಒಡೆಯನ ಕುಮಾರ ಗಣಪತಿರಾಯನು ಹಿಡಿಂಬೇಶ್ವರನ ಗುಡಿಯನ್ನು ಕಟ್ಟಿಸಿ, ಈ ದೇವರ ಪಡಿತರ ದೀಪಾರಾಧನೆಗೆ ಮಲ್ಲಾಪುರ, ಆಯತೊಳಲು, ಈ ಎರಡು ಗ್ರಾಮಗಳನ್ನೂ ತಮ್ಮ ತಾಯಿಯ ಹೆಸರಿನಲ್ಲಿ ಕೊಟ್ಟನು. (ರೈಸ್ ಸಾಹೇಬರ ಚಿತ್ರದುರ್ಗದ ಶಾಸನ. ೧೨-೧೩). ಈ ಹಿಡಿಂಬ ರಾಕ್ಷಸನ ಹಲ್ಲೆಂಬುವುದು ಹಿಡಿಂಬೇಶ್ವರನ ಗುಡಿಯಲ್ಲಿದೆ. ಇವರ ಮನೆದೇವರು ಗವೀ ವೀರಂಣ. ವೀರಂಣನ ಗುಡ್ಡದಲ್ಲಿ ಈಶ್ವರ ದೇವಸ್ಥಾನ ವಿದೆ. (ರೈಸ್ ಸಾಹೇಬರ ಚಿತ್ರದುರ್ಗದ ಶಾಸನ ಸಂಖ್ಯೆ ೧೪).

ತರುವಾಯ ಕುರುಬರ ಕಾಲದಲ್ಲಿ ಈ ಪ್ರಾಂತವು ಬುಕ್ಕರಾಯನಿಗೆ ಸೇರಿತ್ತು. (ಮೂಕ ಶಿವಾಲೆ ಶಿಖರದಬಳಿ ಬಂಡೇ ಮೇಲೆ ಬುಕ್ಕರಾಯನ ಸೇವೆ ಎಂದು ಬರೆದಿದೆ.)

ಈ ಗುಡ್ಡದಲ್ಲಿ ರಸಸಿದ್ಧರು ಇದ್ದರೆಂತಲೂ ಇವರು ಭಂಗೀನೀರನ್ನು ಕಲ್ಲಿನ ಮೇಲೆ ಚೆಲ್ಲಿ ಕರೆಹತ್ತಿದ್ದರಿಂದ ಚಿತ್ರಕಲ್ಲು ಎಂದು ಹೆಸರಾಯಿತೆಂತಲೂ ಜನ ಹೇಳಿಕೊಳ್ಳುತಾರೆ.

---

## ೨ ನೇ ಅಧ್ಯಾಯ.

### ದಕ್ಷಿಣದೇಶಕ್ಕೆ ಕಾಮಗೇತಿಯವರು ಬಂದದ್ದು
### ಶಕ ೧೪೭೮ ನೇ ನಳ ಸಂ||

ದಿಳ್ಳಿಯಿಂದ ನಾಡ ತಳವಾರರು ಬಂಧದ್ದು.

ಉತ್ತರ ದೇಶದಲ್ಲಿ ಜಡಕಲ್ಲು* ದುರ್ಗದಿಂದ ದಿಳ್ಳೀ ನಾಡ ತಳವಾರರಾದ ವಾಲ್ಮೀಕಿ ಗೋತ್ರದವರೆಂದು ಹೇಳಲ್ಪಡುವ ಕಾಮಗೇತಿವಂಶದ ೧ ಸಬ್ಬಗಡಿ ಓಬನಾಯಕ, ೨ ಜಡವಿನಾಯಕ, ೩ ಬುಳ್ಳನಾಯಕ, ಈ ಮೂರುಜನ ಅಂಣ ತಮ್ಮಂದಿರು ಉತ್ತರ ದೇಶದ ಅವಾಂತರದಿಂದ ತಮ್ಮ ಮನೆದೇವರು ಅಹೋಬಲ ನರಸಿಂಹಮೂರ್ತಿಯ ಪೆಟ್ಟಿಗೆ, ತುರು, ಕುರಿ, ಕೊಲ್ಲಾರಿ, ಮುಂತಾದ ಕಂಪಳವನ್ನು ತೆರಳಿಸಿಕೊಂಡು ದಕ್ಷಿಣ ದೇಶಕ್ಕೆ ಬಂದರು. ದಾರಿಯಲ್ಲಿ ವಿಜಯನಗರದಲ್ಲಿ ಇಳಿದು, ಹಂಪೆ ವಿರೂಪಾಕ್ಷೇಶ್ವರನ ದರ್ಶನ ಮಾಡಿಕೊಂಡು ಬರುವಾಗ, ಆನೇಗೊಂದಿ ಸ್ಥಳದವರಾಗಿ ವಿರೂಪಾಕ್ಷೇಶ್ವರನ ಗುಡಿಯಲ್ಲಿ ಮಂತ್ರಪುಷ್ಪದ ಕೆಲಸವನ್ನು ಮಾಡುತಿದ್ದ ೧ ಕರಿಜೋಯಿಸ ೨ ವಿರೂಪಾಕ್ಷ ಜೋಯಿಸ ಈ ಇಬ್ಬರು ಹುಡುಗರು ಈ ನಾಡತಳವಾರರ ಬೆನ್ನಹತ್ತಿ ಬಂದರು. ಮೇಲೆ ಕಂಡ ಮೂರುಜನ ನಾಯಕರೂ ಬಿಳಿಚೋಡಿಗೆ ಬಂದು ರೊಪ್ಪ ಹಾಕಿಕೊಂಡು ಮೂರು ತಿಂಗಳು ಇದ್ದರು. ಬಿಳಿಚೋಡು ಸ್ಥಳದ ಪಂಚಾಂಗದ ಜೋಯಿಸರು ನಷ್ಟ ಸಂತಾನರಾಗಿದ್ದದರಿಂದ ಗ್ರಾಮದಲ್ಲಿದ್ದ ಗೌಡ, ಸೇನಭೋಗ, ನಾಯಕವಾಡಿ ಮುಂತಾದವರಿಗೆ ಹೇಳಿ ಈ ಕರಿ ಜೋಯಿಸ ವಿರೂಪಾಕ್ಷ ಜೋಯಿಸರಿಗೆ ಭೋಗಪಟ್ಟೆ ಬರಸಿಕೊಟ್ಟು ಅವರನ್ನು ಸ್ಥಳಕ್ಕೆ ಜೋಯಿಸರನ್ನಾಗಿ ನೇಮಿಸಿದರು. ತರುವಾಯ ಮೇಲೆ ಕಂಡ ನಾಯಕರು ನೀರುತಡಿ ಎಂಬ ಗ್ರಾಮದ ಬಳಿಯಲ್ಲಿ ರೊಪ್ಪಹಾಕಿಕೊಂಡಿದ್ದರು. ಇವರ ಮನೆದೇವರು ಸ್ವಪ್ನದಲ್ಲಿಪಚಾರಿಸಿ—ನನ್ನ ಹೊತ್ತುಕೊಂಡು ಕಂಡಕಂಡ ಕಡೆಗೆ ಹೋಗಬೇಡ, ನಾನು ಈ ಗ್ರಾಮದಲ್ಲಿ ವಾಸವಾಗಿರುತೇನೆ, ಎಂದು ಅಪ್ಪಣೆಕೊಡಿಸಿದ

---

* ರೈಸ್ ಸಾಹೇಬರ ಚಿತ್ರದುರ್ಗದ ಶಾಸನ ಇಂಗ್ಲೀಷ್ ಉಪೋದ್ಘಾತ ೨೮ನೇ ಪುಟದ ಕೆಳಗಡೆ ನೋಡಿ.

ನಂತೆ. ಆಗ ಈ ಗ್ರಾಮದಲ್ಲಿ ಗುಡಿಕಟ್ಟಿಸಿ ದೇವರನ್ನಿಟ್ಟು ತಾವು ಎಡಬಲದ ಗ್ರಾಮಗಳಲ್ಲಿ ಕಾದುಕೊಂಡಿದ್ದರು. ಜಡಕಲ್ಲು ನಾಯಕನ ಮಗ ಹಿರೀಹನುಮನಾಯಕನು ಸಾಗಲೆ ಗ್ರಾಮದಲ್ಲಿ ನಿಂತನು. ಸಬ್ಬಗಡಿ ಓಬನಾಯಕನ ಮಗ ತಿಮ್ಮಂಣ್ಣನಾಯಕನು ಮತ್ತಿಗ್ರಾಮದಲ್ಲಿ ನಿಂತನು. ಬುಳ್ಳನಾಯಕನ ಮಕ್ಕಳು ೧ ಚಿಕ್ಕಹನುಮನಾಯಕ ೨ ಓಬಂಣನಾಯಕ ಬಿಳಿಚೋಡಲ್ಲಿಯೇ ನಿಂತರು.

ತಿಂಮಣ್ಣನಾಯಕನ ಅಭಿವೃದ್ಧಿ.

ಈ ಮತ್ತಿ ಗ್ರಾಮದಲ್ಲಿದ್ದ ತಿಂಮಣನಾಯಕನ ಬಳಿಗೆ ವಿರೂಪಾಕ್ಷ ಜೋಯಿಸರು ಯಾಚಕನ ನಿಮಿತ್ತವಾಗಿ ಬಂದು ಮುಂದೆ ಸ್ವಲ್ಪ ದಿವಸದಲ್ಲಿ ನಿಮಗೆ ಉನ್ನತವಾದ ಪದವಿ ಬರುವುದು, ಎಂದು ಹೇಳಿದರು. ಈ ತಿಂಮ್ಮಂಣನಾಯಕನು ತನ್ನ ಕುಟುಂಬ ಕಂಪಳ ಸಮೇತನಾಗಿ ಬಂದು ಹಡವನಹಾಳಲ್ಲಿ ನಿಂತನು. ಅಚ್ಯುತರಾಯ ಕೃಷ್ಣರಾಯರ ಸಂತತಿಯ ಸಾಳೋನರಸಿಂಗರಾಯನು ಈ ತಿಂಮ್ಮಂಣನಾಯಕನನ್ನು ಕರೆಯಿಸಿ ಹೊಳಲಕೆರೆಯ ನಾಯಕ ತನವನ್ನು ಕೊಟ್ಟನು. ಶಕ ೧೪೮೫ನೇ ರುಧಿರೋದ್ಗಾರಿ ಸಂ॥ ವೈಶಾಖ ಶುದ್ಧ ೧೦ ಮಂಗಳವಾರದಲ್ಲೂ ಈ ತಿಂಮಣ್ಣನಾಯಕನು ಗೋಪಾಲದೇವರ ಗುಡಿಯನ್ನು ಕಟ್ಟಿಸಿದನು. ಶಕ ೧೪೭೦ನೇ ಬಹುಧಾನ್ಯ ಸಂ॥ ದಲ್ಲಿ ಈತನಿಗೆ ಹಿರಿಯೂರನಾಯಕತನವಾಯಿತು. ಇಲ್ಲಿ ವೀರಭದ್ರನ ಗುಡಿ ಕಟ್ಟಿಸಿದನು.

ರಂಗಪಟ್ಟಣ ಕಟ್ಟಿದ್ದು.

ಹಡವನಹಾಳಲ್ಲಿ ತಿಮ್ಮಂಣನಾಯಕನು ನಾಲ್ಕುವರುಷ ಇದ್ದು ರಂಗಪಟ್ಟಣವನ್ನು ಕಟ್ಟಿಸಿದನು. ಈ ವೂರನ್ನು ಕಟ್ಟಲು ಪ್ರಮೋದೂತ ಸಂ॥ ಮಾರ್ಗಶಿರ ಶುದ್ಧ ೧೦ ಗುರುವಾರ ರೋಹಿಣೀ ನಕ್ಷತ್ರದಲ್ಲಿ ಆರಂಭಮಾಡಿ ಈ ಸಂ॥ ಮಾಘ ಮಾಸದಲ್ಲಿ ಗ್ರಾಮಪ್ರವೇಶಮಾಡಿದರು. ಇದಕ್ಕೆ ಮುಂಚೆ ಶುಕ್ಲ ಸಂ॥

ರಾಯದುರ್ಗದಲ್ಲಿ ಅನಾವೃಷ್ಟಿ.

ದಲ್ಲಿ ರಾಯದುರ್ಗದ ಸೀಮೆಗೆ ಜ್ಯೇಷ್ಠ ಮಾಸದಿಂದ ಆಶ್ವೀಜ ಬ॥ ೩೦ ವರೆಗೂ ಮಳೆಹೋದ್ದರಿಂದ, ಬರ ಬಂದು ಬಹಳ ಜನ ಕಂಗೆಟ್ಟರು. ಅಲ್ಲಿನ ದೊರೆಯಾದ ಹಾಲಪ್ಪನಾಯಕನು ಬಿಳಿಚೋಡಿನಲ್ಲಿದ್ದ ವಿರೂಪಾಕ್ಷ ಜೋಯಿಸ

ನನ್ನು ಕರೆಯಿಸಿ ಅನಾವೃಷ್ಟಿಯಾಗಿದೆ, ಪರ್ಜನ್ಯ ಜಪಮಾಡಿಸಬೇ ಕೆಂದು ಹೇಳಿದನು. ಆಗ ಈ ಸೀಮೆಯಲ್ಲಿದ್ದ ಬ್ರಾಹ್ಮಣರನ್ನು ಕರೆ ಯಿಸಿಕೊಂಡು, ವಿರೂಪಾಕ್ಷ ಜೋಯಿಸ ಮುಂತಾದವರು ನೇಮದಿಂದ ದಿನ ಒಂದಕ್ಕೆ ಏಳು ಯಾಲಕ್ಕೀಕ್ಕಾಳು ಸಕ್ಕರೆ ಹಾಲು ಈ ಮೇರಿಗೆ ಸೇವಿ ಸುತಾ ಒಂಭತ್ತು ದಿನ ಜಪಮಾಡಿದರು. ಆಗ ಏಕಾರ್ಣವವಾಗಿ ಅತಿವೃ ಷ್ಟಿಯಾಗಿ ಕೆರೆಗಳೆಲ್ಲಾ ತುಂಬಿದವು. ಈ ಜಪಕ್ಕೆ ಮೆಚ್ಚಿ ಈ ವಿರೂ ಪಾಕ್ಷ ಜೋಯಿಸರನ್ನು ಆನೆಯಮೇಲೆ ಕೂರಿಸಿ, ಮೆರವಣಿಗೆ ಮಾಡಿಸಿ ತುಂಬ ಉಡುಗರೆಯನ್ನು ಕೊಟ್ಟರು. ಈ ವಿರೂಪಾಕ್ಷ ಜೋಯಿಸರ ಮಗ ಪರಶುರಾಮಪ್ಪನು ದುರ್ಗದಲ್ಲಿ ತಿಮ್ಮಣನಾಯಕರ ಬಳಿಯಲ್ಲಿ ಸರ್ವಾಧಿಕಾರಕ್ಕೆ ನಿಂತನು.

ದೊರೆಯ ಮದುವೆ.

ಪ್ರಮೋದೂತ ಸಂ|| ದಲ್ಲಿ ಜೆಲ್ಲಹಳ್ಳಿಯ ಹೆಂಣುಮಗಳು ಓದುವ ತಿಮ್ಮವ್ವ ಎಂಬ ಹುಡಿಗಿಯನ್ನು ತಿಮ್ಮಂಣ ನಾಯಕನಿಗೆ ಕೊಟ್ಟು ಮದುವೆಯಾಯಿತು. ಶಕ ೧೪೯೪ನೇ ಆಂಗೀರಸ ಸಂ|| ವೈಶಾಖಮಾಸದಲ್ಲಿ ತರೀಕೆರೆಯ ಪೂವಳ ಹನುಮಪ್ಪನ ದಂಡು ಬಂದು ೫ ಗ್ರಾಮಗಳನ್ನು ತೆಗೆದುಕೊಂಡು ರಂಗ ಪಟ್ಟಣಕ್ಕೆ ಲಗ್ಗೆ ಹತ್ತುತಿದಾರೆಂಬ ವರ್ತಮಾನ ತಿಳಿಯಿತು. ತಿಮ್ಮಂಣ ನಾಯಕನು ರಾತೋರಾತು ನಾಗತಿಯವರೊಡನೆ ಉಗ್ರಾಣ ಸಮೇತ ನೂಲೋಕಣಮೆಹಾದು ದುರ್ಗದ ಗುಡ್ಡಕ್ಕೆ ಬಂದನು. ರಂಗಪಟ್ಟಣ ವೇನೊ ಲಗ್ಗೆಯಾಯಿತು.

ಮೇಲ್ದುರ್ಗದಲ್ಲಿ ಅರಮನೆ ಕಟ್ಟಿದ್ದು.

ಶಕ ೧೪೯೫ನೇ ಶ್ರೀಮುಖ ಸಂ|| ದಲ್ಲಿ ಮೇಲ್ದುರ್ಗದಲ್ಲಿ ಅರಮ ನೆಯನ್ನೂ ಅದರ ಸುತ್ತಿನ ಕೋಟೆಯನ್ನೂ ಸಹ ಕಟ್ಟಿಸಿದರು. ತರುವಾಯ ತಿಮ್ಮಂಣನಾಯಕನಿಗೆ ವಿಜ ಯನಗರದ ಸಂಸ್ಥಾನದವರು ಶ|| ೧೪೯೫-೬ನೇ ಭಾವ ಸಂ|| ದಲ್ಲಿ ದುರ್ಗದ ನಾಯಕತನವನ್ನು ಕೊಟ್ಟರು. ಆಗ ತಿಮ್ಮಂಣ

ತಿಮ್ಮಂಣನಾಯಕ ನಿಗೆ ದುರ್ಗದ ನಾಯಕತನವಾದ್ದು.

ನಾಯಕನು ನೆಲ್ಲೀಕಾಯಿ ಸಿದ್ದಪ್ಪನ ಗುಡ್ಡದ ಸುತ್ತಿ ನಕೋಟೆ, ರಣಮಂಡಲದ ಸುತ್ತಿನಕೋಟೆ, ವನಕೇ ಕಂಡೀಬಾಗಿಲ ಸುತ್ತಿನ ಕೋಟೆ, ಇವುಗಳನ್ನು ಕಟ್ಟಿ ಸಿದನು. ಬೆಳಗಿನಿಂದ ಸಾಯಂಕಾಲದವರೆಗೆ ಕಟ್ಟಿದ ಕೋಟೆಯು

ಗುರುತೇ ಇಲ್ಲದಹಾಗೆ ಬಿದ್ದುಹೋಯಿತಂತೆ. ಪುನಃ ಮೂರನೇ ದಿವಸ ಕಟ್ಟಿಸಿದ್ದು ಆ ದಿನ ಸಾಯಂಕಾಲಕ್ಕೇ ಬಿದ್ದುಹೋಯಿತಂತೆ. ಈ ಮೇರೆ ಹದಿನೈದು ದಿವಸ ಕಟ್ಟಿದಾಗ್ಯೂ ನಿಲ್ಲದಿರಲು, ಇದೇನಾಶ್ಚರ್ಯವೆಂದು ಪುಸ್ತಕನೋಟ, ಶಕುನ ಮೊದಲಾದ್ದನ್ನು ನೋಡಿಸಲಾಗಿ, ಯಳವರ್ತಿ ಹಳೇಪೈಕದ ಗಿರಿಯನೆಂಬ ದಂಡಿಗೇ ದಾಸನ ಮೈಮೇಲೆ ದೇವತೆಯು ಬಂದು, " ಈ ಕೋಟೆ ನಿಲ್ಲದಂತೆ ಮಾಡಿರುವವಳು ನಾನು, ನನ್ನಭೂಮಿಗೆ ಬಂದು ನನ್ನ ದರ್ಶನವನ್ನು ಮಾಡದೆ ನನ್ನ ಅಪ್ಪಣೆ ಇಲ್ಲದೆ ನೀನು ಗ್ರಾಮ ಕಟ್ಟಕೂಡದು " ಎಂದುಪಚಾರಿಸಿದಳಂತೆ. ನೀನು ಯಾರು ಎಂದು ವಿಚಾರಮಾಡುವಲ್ಲಿ ಆಗ ದೇವತೆಯು—ಇಲ್ಲಿದ್ದ ಇಷ್ಟದೇವತೆಗಳು ನನ್ನೊಳಗೆ ಇದಾರೆ. ನಾನು ಏಕನಾಥಿ, ಇಲ್ಲಿ ಬಂದು ಬಂಡೆಯಲ್ಲಿ ಒಡೆದು ಮೂಡಿದೇನೆ, ಎಂದು ಬಂಡೇತೋರಿಸಿ ಅಪ್ಪಣೆ ಕೊಟ್ಟಳಂತೆ. ಆಗ ದೇವರಿಗೆ ಹರಸಿಕೊಂಡು ವಿಾಸಲ ಕಟ್ಟಿದ್ದರಿಂದ ಕೋಟೆಯು ನಿಂತಿತಂತೆ. ಈ ಮೂರು ಸುತ್ತಿನ ಕೋಟೆ, ವನಕೆ ಕಂಡಿ ಬಾಗಿಲು, ಹನುಮಂತದೇವರ ಗುಡಿ, ಏಕನಾಥಮ್ಮನ ಗುಡಿ ಇವುಗಳನ್ನು ಕೂಡಲೆ ಕಟ್ಟಿಸಿದರು. ತರುವಾಯ ಸಂಪಿಗೇಸಿದ್ಧೇಶ್ವರನು ತಿಮ್ಮಂಣನಾಯಕನಿಗೆ ಪ್ರಸನ್ನನಾದನಂತೆ, ಅಲ್ಲಿ ರಸಸಿದ್ಧರು ೭ ಮಂದಿ ಕಿನ್ನರಿ ಕಲ್ಲಿನಮೇಲೆ ಇದ್ದರು. ದೊರೆಯು ಅವರ ದರ್ಶನವನ್ನು ಮಾಡಿ ಸಮಸ್ಕಾರ ಮಾಡಲಾಗಿ ಆ ಮಹಾತ್ಮರು, " ಬಾರೈ ಮಗನೆ, ಮುಂದೆ ನಿನಗೆ ಈ ಸ್ಥಳದಲ್ಲಿ ಮಹಾ ಪದವಿ ಬರುವುದು. ಅರಿತು ನಡೆದರೆ ಆರು ಪಟ್ಟ, ಮರೆತು ನಡೆದರೆ ಮೂರುಪಟ್ಟ" ಎಂದು ಹೇಳಿ ತಿಮ್ಮಂಣನಾಯಕನಿಗೆ ದೆಸೆಗಟ್ಟಿನ ದೂಳತ, ಸಿದ್ಧ ಮೂಲಿಕೆ, ಕೈ ಅಂಬು, ಇವುಗಳನ್ನು ಕೊಟ್ಟು ಸಂಪಿಗೇ ಸಿದ್ಧೇಶ್ವರನ ಗುಡಿಗೆ ದೊರೆಯನ್ನು ಕರೆತಂದು " ಈ ದೇವರ ವಿಷಯದಲ್ಲಿ ಭಕ್ತಿಯಾಗಿರು " ಎಂದು ಬುದ್ಧಿ ಹೇಳಿ ಹೊರಟುಹೋದರಂತೆ. ಆ ತರುವಾಯ ದೊರೆಯು ಅದೇ ಪ್ರಕಾರ ನಡೆದುಕೊಳ್ಳುತ್ತಾ ಇದ್ದನು. ತಿಮ್ಮಂಣನಾಯಕನ ದೊರೆತನ ದಿನೇ ದಿನೇ ವೃದ್ಧಿಯಾಗುತಾ ಬಂತು.

ಸಿದ್ಧ ಪುರುಷರ ದರ್ಶನ.

ಅಮಾನುಷ ವ್ಯಾಪಾರ ವಿಷಯ.

ಯಾವ ಪುಣ್ಯವಂತನ ಅಭಿವೃದ್ಧಿಯನ್ನು, ಯಾವ ದೊಡ್ಡರಾಜ್ಯದ ಏಳಿಗೆಯ ಮೂಲವನ್ನೂ ವಿಚಾರಿಸಿಕೊಂಡು ಹೋದಾಗ್ಯೂ, ಆಯಾ ದೊರೆಗಳ ಆದಿಪುರುಷರುಗಳಲ್ಲಿ ವಿಶೇಷವಾದ ದೈವಭಕ್ತಿಯೂ ಯಾವುದಾದರೂ ಒಂದು ವಿಧವಾದ ಮಹತ್ತನ್ನುಳ್ಳ ಸಿದ್ಧರಕೃಪೆಯೂ, ಇತ್ತೆಂತಲೂ, ಆಮೂಲಕ ಮಹತ್ತರವಾದ ಕಾರ್ಯಗಳನ್ನು ಜರುಗಿಸುವ ಸಾಮರ್ಥ್ಯವು ಅಂಥಾ ಮೂಲಪುರುಷರುಗಳಲ್ಲಿ ಹುಟ್ಟಿದ್ದು ಅಮಾನುಷ ಚೈತನ್ಯದ ವ್ಯಾಪಾರವೆಂತಲೂ ಹೇಳುವುದು ಎಲ್ಲಾ ಚರಿತ್ರ ಕರ್ತರುಗಳ ಅನುಭವಕಕ್ಕೂ ವೇದ್ಯವಾದ ವಿಚಾರವಾಗಿದೆ. ಆದರೆ ಇಂಥಾ ಸಂಗತಿಗಳನ್ನು ಕೆಲವರು ಸ್ಪಷ್ಟವಾಗಿ ಬರೆದು ವಿವರಿಸಿದಾರೆ, ಮತ್ತೆ ಕೆಲವರು ಕುಚೋದ್ಯವಾಗಿ ಕಾಣಿಸಿದಾರೆ. ಇದು ಎಂತಾದರೂ ಆಗಲಿ, ಆಕಾಲದಲ್ಲಿಸಾಧಾರಣ ಜನರಿಗೂ ಪದವಿಯಲ್ಲಿದ್ದವರಿಗೂ ಈವಿಧವಾದ ನಂಬಿಕೆ ಇತ್ತು ಎಂದು ತೋರಿಸುವುದೂ ಕೂಡ ಚರಿತ್ರ ಕರ್ತರ ಧರ್ಮವಾಗಿದೆ, ಎಂದು ತೋರುವುದು.

"ಹರಿಯದ ಹಚ್ಚಡ ಮುರಿಯದ ಒಡವೆ"

ವಿರೂಪಾಕ್ಷ ಜೋಯಿಸರ ಮಗ ಪರಶುರಾಮಪ್ಪನಿಗೆ ಸರ್ವಾಧಿಕಾರವಾಯಿತಷ್ಟೆ ಈ ಪರಶುರಾಮಪ್ಪನು ದೊರೆಯಲ್ಲಿಯೂ ನಾಗತಿಯರಲ್ಲಿಯೂ ಬಹು ನಂಬಿಕೆಯಾಗಿರುತಾ ಒಂದುದಿನ ನಮ್ಮ ಹಿರಿಯರಾದಿಯಾಗಿ ನಮ್ಮನ್ನು ಸಂರಕ್ಷಣೆ ಮಾಡುತಿದೀರಿ, ಮುಂದೆ ನಮ್ಮ ಮಕ್ಕಳು ಬದುಕಿಕೊಳ್ಳಲು "ಹರಿಯದ ಹಚ್ಚಡ, ಮುರಿಯದ ಒಡವೆ" ಎಂಬದೊಂದು ಉದ್ಯೋಗವನ್ನು ಪಾಲಿಸಬೇಕು ಎಂದು ತಿಮ್ಮಣ್ಣನಾಯಕನಿಗೆ ಅರಿಕೆಮಾಡಿದನು. ಇದು ದೊರೆಯ ಚಿತ್ತಕ್ಕೆ ಬಂತು. ಆಗ ಲಿಂಗದಹಳ್ಳಿ ಪಟ್ಟಡಿ ೧ಕ್ಕೆ ೧೬ ಗ್ರಾಮದ ಸೇನಭೋಗ ತನಕ್ಕೆ ಪರಶುರಾಮಪ್ಪನನ್ನು ನೇಮಿಸಿ ಆಯಾ ಗ್ರಾಮದ ಗೌಡ ತಳವಾರ ಮುಂತಾದ ಆಯಗಾರರನ್ನು ಕೈವಾಡದವರನ್ನೂ ಕರೆಯಿಸಿ ಅವರ ಪಟ್ಟಡಿಯ ಸೇನುಭೋಗತನಕ್ಕೆ ಪರಶುರಾಮಪ್ಪನ ಮಕ್ಕಳು ಯಲ್ಲಪ್ಪ. ಭೂನಪ್ಪ ಇವರಿಗೆ ನಿರೂಪಕೊಡಿಸಿದೆ, ಎಂದು ಹೇಳಿ ಅರಮನೆ ಕೆಲಸ, ಸ್ಥಳ ಮನೇಸಾಗು, ಸಂತು, ಎತ್ತುವಳಿ, ಮೊದಲಾದ ಕೆಲಸಗಳನ್ನು ಮಾಡುತಾ, ಆ ಸೇನುಭೋಗರ ಸಮ್ಮತಿ

ಯಿಂದ ನಡೆದು ಕೊಳ್ಳುವುದೆಂದು ನೇಮಕ ಮಾಡಿದ್ದೂ ಅಲ್ಲದೆ ಅವರಿಗೆ ಸ್ಥಳದಲ್ಲಿ ನಡೆಯಿಸಬೇಕಾದ ಮರ್ಯಾದೆಯನ್ನು ನಿಗದಿ ಮಾಡಿಸಿದ್ದು ಹೇಗೆಂದರೆ :—

ಗ್ರಾಮ ಒಂದಕ್ಕೆ

೧ ಹೊಲ

೧ ಕೆರೆಹಿಂದೆ ಗದ್ದೆ

೧ ತೋಟ

೧ ಮಳಲು ಗ್ರಾಮದಲ್ಲಿ ಎರಡು ಎತ್ತಿನ ಗಳೆ ೧ಕ್ಕೆ ಅಳೆವತ್ತ (ಅಳೆಯುವ ಬತ್ತ) ೭ ।. ಐದು ಕೊಳಗ

೧ ಎರೆ ಗ್ರಾಮದಲ್ಲಿ ಎಂಟೆತ್ತಿನ ಗಳೆ ೧ಕ್ಕೆ ಅಳೆವತ್ತ ೭ ॥. ಹತ್ತು ಕೊಳಗ, ಹೊರೆಹುಲ್ಲು, ಮೊರಬತ್ತ, ಬೊಗೆವತ್ತ (ಬೊಗಸೆಬತ್ತ) ಸೊಲಗೆ ೩

೧ ರೈತರು ತೆರುವ ಕಂದಾಯಕ್ಕೆ ದುರ್ಗಿ ೧‾. ವರಹ ೧ಕ್ಕೆ ರುಸುಮು ‾.।. ಹಾಗದ ಕಾಸು.

೧ ಜಾಡರ ಮಗ್ಗ ೧ಕ್ಕೆ ‾.।. ಹಾಗದ ಕಾಸು.

೧ ಅಂಗಡಿ ೧ಕ್ಕೆ ದಿನ ೧ಕ್ಕೆ ದುಗ್ಗಾಣಿ ತೂಕ ಅಡಕೆ ೧೦ ವೀಳಯದೆಲೆ.

೧ ಗೊಲ್ಲರ ಹಟ್ಟಿ ೧ಕ್ಕೆ ವರುಷ ೧ಕ್ಕೆ ೧ ಕುರಿ.

ಮತ್ತು ಅಗಸರು ಹಡದಿ ಸೀರೆ ಮುಂತಾಗಿ ನಡಿಸಿಕೊಡಬೇಕೆಂದು ದೊರೆಯು ತಾನೇ ಅಪ್ಪಣೆಮಾಡಿದನು.

ಇದಕ್ಕೆ ಬರಸಿಕೊಟ್ಟ ಶಾಸನಕ್ರಮ ಹೇಗೆಂದರೆ :—

ಸೇನಭೋಗ ತನದ ಶಾಸನ.

"ಶ್ರೀ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೆ । "ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ "ಶಂಭವೆ ॥ ॥ ಸ್ವದತ್ತಾ ದ್ವಿಗುಣಂ ಪುಣ್ಯಂ ಪರದ "ತ್ತಾನುಪಾಲನಂ ಪರದತ್ತಾಪಹಾರೇಣ ಸ್ವದತ್ತಂ "ನಿಷ್ಫಲಂ ಭವೇತ್॥ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲೀವಾಹನ

"ಶಕ ವರುಷಗಳು ೧೫೧೦ ನೇ ವಿಕ್ರಮ ಸಂ|| ಆಶ್ವೀಜ ಶು|| ೧೦ ಗುರು
"ವಾರ ವಿಜಯ ದಶಮಿ ಮಹೋತ್ಸವ ಕಾಲದಲ್ಲಿ ಶ್ರೀಮನ್ಮಹಾನಾಯ
"ಕಾಚಾರ್ಯ ಕಾಮಗೇತಿ ಕಸ್ತೂರಿ ವೀರ ಮತ್ತಿ ತಿಂಮಣ್ಣನಾಯಕರು
"ಶ್ರೀವಿರೂಪಾಕ್ಷದಲ್ಲಿ ಮಂತ್ರಪುಷ್ಪಕರಾದ ಕಾಶ್ಯಪಗೋತ್ರದ ಆಪ
"ಸ್ತಂಬಸೂತ್ರದ ಕರೇಜೋಯಿಸ ವಿರೂಪಾಕ್ಷಜೋಯಿಸರ ಪೌತ್ರ
"ರಾದ ಪರಶುರಾಮಪ್ಪನ ಪುತ್ರರಾದ ಯಲ್ಲಪ್ಪ ಭೂನಪ್ಪಗೆ ಈ ಮಹಾ
"ನವಮಿ ಉತ್ಸವ ಕಾಲದಲ್ಲು, ನಮ್ಮ ಹಿರಯರಿಗೆ ಪುಣ್ಯಬರಬೇಕೆಂದು
"ಲಿಂಗದ ಹಳ್ಳಿ ಪಟ್ಟಡಿ ಸೇನಭೋಗತನವನ್ನು ನೇಮಿಸಿ ಆಯ,
"ಸ್ವಾಮ್ಯ, ರುಸುಮು, ವರ್ತನೆ ಮುಂತಾದನ್ನು ನಿರ್ಣಯಿಸಿ ದಾನ
"ಧಾರಾಪೂರ್ವಕವಾಗಿ ಬರಸಿಕೊಟ್ಟ ಶಾಸನ ನಿರೂಪ ಅದಾಗಿ.

"ನೀವು ನಮ್ಮ ಹಿರಿಯರ ದಿವಸದಾರಭ್ಯ ನಮ್ಮ ಮನೆತನವನ್ನು
"ಹೊಂದಿ ಬಂದವರಾದ ಕಾರಣ ಧರ್ಮಪೂರ್ವಕವಾಗಿ ನಿಮ್ಮ ವಂಶಪಾರಂ
"ಪರ್ಯವಾಗಿ ಸಂರಕ್ಷಣಾರ್ಥವಾಗಿ ಲಿಂಗದಹಳ್ಳಿ ಪಟ್ಟಡಿಯ ಶಾನುಭೋ
"ಗತನವನ್ನು ಧಾರಾಪೂರ್ವಕವಾಗಿ ನಿರ್ಣಯಿಸಿ ಅಪ್ಪಣೆಕೊಡಿಸಿದೇವೆ
"ಯಾಗಿ, ಗ್ರಾಮಾಂತರಗಳ ಗದ್ದೆ, ಬೆದ್ದಲು, ತೋಟ, ರುಸುಂ, ಆಯ
"ಸ್ವಾಮ್ಯ ಮುಂತಾದ್ದನ್ನು ಭುಂಜಿಸಿಕೊಂಡು, ಆ ಚಂದ್ರಾರ್ಕವಾಗಿ
"ಪಾರಂಪರ್ಯವಾಗಿ ಅಪೋಹವಿಲ್ಲದೆ ಅನುಭವಿಸಿಕೊಂಬುವುದೆಂಬದಾಗಿ
"ಶಿಖಾಮೊಹರು ರುಜುವಿನಿಂದ ಬರೆದುಕೊಟ್ಟ ಶಾಸನ." ಈ ಪ್ರಕಾರ
ಶಾಸನವನ್ನು ಬರೆಯಿಸಿ ದೊರೆಯು ಅಪ್ಪಣೆ ಕೊಡಿಸಿದನು.

---

## ೩ ನೇ ಅಧ್ಯಾಯ.

### ಸಾಳೋನರಸಿಂಗರಾಯನ ಮುತ್ತಿಗೆ.

ಸಾಳೋನರಸಿಂಗರಾಯನ ಮುತ್ತಿಗೆ

ಶಕ ೧೫೧೦ ನೇ ಸಂ|| ದ ವರ್ತಮಾನವಾದ ವಿಕ್ರಮ ಸಂ|| ದಲ್ಲು ಮತ್ತೀ ತಿಮ್ಮಣ್ಣನಾಯಕನು ಬಹಳವಾಗಿ ಪ್ರಬಲಿಸಿದಾನೆಂದೂ, ಇವನನ್ನು ಮುರಿಯಬೇಕೆಂದೂ ವಿಜಯನಗರದ ಸಂಸ್ಥಾನದವರು ವೀರಸಾಳೋ ನರಸಿಂಗರಾಯನೊಡನೆ ಸೇನೆಯನ್ನು ಕಳುಹಿಸಿದರು. ಈ ದಂಡು ಮೊಹಲ

ದಿಕ್ಕಿನ ಕಾನಾಪುರದ ಬಳಿಯಲ್ಲಿಬಂದು ಇಳಿಯಿತು. ಇದನ್ನು ತಿಳಿದು ತಿಮ್ಮಂಣನಾಯಕನು ವಿಶೇಷಪರಾಕ್ರಮದಿಂದಶತ್ರುಗಳನ್ನು ಜಯಿಸಿದನು.

ತಿಮ್ಮಂಣನಾಯಕನ ಸಾಹಸ ಮಹಾ ಪರಾಕ್ರಮ

ಈ ಯುದ್ಧದಲ್ಲಿ ಆಚಂದ್ರಾರ್ಕವಾಗಿ ಎಲ್ಲರೂ ಜ್ಞಾಪಕದಲ್ಲಿಡಬೇಕಾದ ಒಂದು ಮಹಾಪರಾಕ್ರಮದ ಸಂಗತಿ ಜರುಗಿತು. ಶತ್ರುಗಳು ದುರ್ಗದ ಬೆಟ್ಟಕ್ಕೆ ಮುತ್ತಿಗೇ ಹಾಕಲು ಬಂದು ಕಾನಾಪುರದ, ಬೈಲಿನಲ್ಲಿಳಿದಿರುವಾಗ, ಒಂದು ದಿನ ಅರ್ಧರಾತ್ರಿಯಲ್ಲಿ ಸೇನೆಯವರು ಪಾಳಯದಲ್ಲಿ ಮಲಗಿಕೊಂಡು ನಿದ್ರೆಮಾಡುತಿರಲು, ತಿಮ್ಮಂಣನಾಯಕನು ಒಂಟಿಯಾಗಿ ಆ ಪಾಳಯಕ್ಕೆ ನುಗ್ಗಿ ಸೇನಾಪತಿಯಾದ ಸಾಳೋ ನರಸಿಂಗರಾಯನ ಖಾಸಾಕುದುರೆಯನ್ನು ಕಟ್ಟಿದ್ದ ಕಡೆಗೆ ಹೋಗಿ ಸ್ವಲ್ಪವೂ ಗದ್ದಲವಾಗದಂತೆ ಅದರ ಅಗಾಡಿಯನ್ನೂ ಪಿಚಾಡಿಯನ್ನೂ ಬಿಚ್ಚುತ್ತಾ ಇದ್ದನು. ಆಗ ಕುದುರೆಯು ಕುಣಿದು ಶಬ್ದಮಾಡಿತು. ಕಾಸದಾರನಿಗೆ ಎಚ್ಚರವಾಯಿತು. ಅವನು ಕಣ್ಣನ್ನು ಹೊಸಗಿಕೊಳ್ಳುತಾ ಎದ್ದನು. ಆಗ ತಿಮ್ಮಂಣ್ಣನಾಯಕನು ಅವನಿಗೆ ಕಾಣದ ಹಾಗೆ ನೆಲದಮೇಲೆ ಮಲಗಿಕೊಂಡು ಅಲ್ಲಿದ್ದ ಹುಲ್ಲನ್ನು ತನ್ನ ಮೇಲೆ ಹಾಕಿ ಕವಿಚಿಕೊಂಡನು. ಕುದುರೆಯವನು ಕಿತ್ತುಹೋಗಿದ್ದ ಕುದುರೆಯ ಗೂಟವನ್ನು ನೆಲದಮೇಲೆ ಇರಿಸಿ ಗಟ್ಟಿಯಾಗಿ ಪೆಟ್ಟಿದನು. ಆ ಗೂಟವು ಅಂಗೈಯನ್ನು ಅಗಲವಾಗಿ ಚಾಚಿಕೊಂಡು ಮಲಗಿದ್ದ ತಿಮ್ಮಂಣನಾಯಕನ ಬಲದ ಹಸ್ತದ ಮಧ್ಯೆ ಹಾದು ನೆಲಕ್ಕೆ ಬಲವಾಗಿ ಇಳಿಯಿತು. ತರುವಾಯ ಕುದುರೇ ಚಾಕರನು ಅದನ್ನು ಆ ಗೂಟಕ್ಕೆ ಕಟ್ಟಿ ಮಲಗಿಕೊಂಡನು. ಅವನಿಗೆ ನಿದ್ರೆ ಬಂದುದನ್ನು ಕಂಡು, ಪಾಳಯಗಾರನು ತನ್ನ ಎಡಗೈಯಿಂದಾ ಸೊಂಟದಲ್ಲಿದ್ದ ಬಾಕನ್ನು ಹಿರಿದುಕೊಂಡು ತನ್ನ ಬಲಗೈಮಣಿಕಟ್ಟನ್ನು ಕುಯಿದು ಮೇಲಕ್ಕೆ ಎದ್ದು ಮೋಟಕೈಗೆ ಬಟ್ಟೆಯನ್ನು ಸುತ್ತಿ ಅದೇ ಕುದುರೆಯನ್ನು ಬಿಚ್ಚಿ ಅದರ ಮೇಲೆ ಏರಿಕೊಂಡು ಮೇಲು ದುರ್ಗಕ್ಕೆ ಹೋದನು. ಈ ಸಾಹಸ ಇಲ್ಲಿಗೇ ನಿಲ್ಲಲಿಲ್ಲ. ಮೂರನೇ ದಿವಸ, ಸಾಳೋ ನರಸಿಂಗರಾಯನು, ಕೂತು ಕೊಳ್ಳುತಿದ್ದ ಖಾಸಾ ಆನೆಯನ್ನು ದುರ್ಗದ ತಪ್ಪಲಲ್ಲಿರುವ ತಿಮ್ಮಂಣನಾಯಕನ ಕೆರೆಗೆ ನೀರು ಕುಡಿಸಲು ಹಿಡಿತಂದರು. ಇದು ಪಾಳಯಗಾರನಿಗೆ ತಿಳಿಯಿತು. ಅವನು ಆಕ್ಷಣ

ದಲ್ಲಿಯೇ ಎದ್ದು ತನ್ನ ಬಿಲ್ಲನ್ನು ತರಿಸಿ ಅದನ್ನು ಕಾಲಲ್ಲಿ ಮೆಟ್ಟಿ ಬಾಣ ವನ್ನು ಹೆದೆಗೆ ಏರಿಸಿ, ಅದನ್ನು ಆನೆಯ ಹಣೆಗೆ ಗುರಿಕಟ್ಟಿ ಎಡಗೈಯಲ್ಲಿ ತುಯಿದು ಬಿಟ್ಟನು. ಅಲಗು ಆನೆಯ ಭ್ರೂಮಧ್ಯಕ್ಕೆ ತಗಲಿ ಅದು ಕಿರ್ರನೆ ಅರಚಿಕೊಂಡು ಬಂದೇಟಿಗೆ ನೆಲಕ್ಕೆಬಿದ್ದು ಪ್ರಾಣವನ್ನು ಬಿಟ್ಟಿತು.

ಸೇನೆಯವರನಂಬಿಕೆ.

ಆಗ ಶತ್ರುಗಳು ಪುನಃ ಮುತ್ತಿಗೆ ಹಾಕಿದರು ತಿಮ್ಮಂಣನಾಯಕನು ತನ್ನ ನಾಗತಿಯರನ್ನು ಗುಡ್ಡದ ಹಿಂದಕ್ಕೆ ಕಳುಹಿಸಿ ತನ್ನ ಬಳಿಯಲ್ಲಿದ್ದ ಗುರಿಕಾರರನ್ನೂ ಮಕ್ಕಳನ್ನೂ ಕರಸಿ ಏನು ಮಾಡಬೇಕೆಂದು ಕೇಳಲಾಗಿ, ಅವರು ದೊರೆಯನ್ನು ಕುರಿತು, ಮಹಾಸ್ವಾಮಿ, ನಾವು ನಿಮ್ಮನ್ನು ಒಪ್ಪಿಸಿಕೊಡುವುದಿಲ್ಲ, ಕೌಲಿಗೂ ಮಾತನಾಡುವುದಿಲ್ಲ, ನಿಮ್ಮ ಸಂಗಡ ಪ್ರಾಣವನ್ನು ಬಿಡಲು ಸಿದ್ಧವಾಗಿದೇವೆ, ಇದಕ್ಕೆ ನಾವು ತಪ್ಪಿದರೆ ಸಿದ್ದಯ್ಯ, ರಂಗಯ್ಯ, ಚಿತ್ರದೇವರು, ಇವರಿಗೆ ತಪ್ಪಿದಂತೆ ಭಾವಿಸಬೇಕು, ಎಂಬದಾಗಿ ಅರಿಕೇ ಮಾಡಿ ಭಾಷೆಕೊಟ್ಟು ಕ್ರೂರವಾಗಿ ಲಡಾಯಿ ಮಾಡಿದರು. ಶತ್ರುಗಳಿಗೆ ದುರ್ಗವಶವಾಗಲಿಲ್ಲ

ಕಲ್‌ಬುರ್ಗಿಯಲ್ಲಿ ತಿಂಮ್ಮಣನಾಯಕನ ಪರಾಕ್ರಮ.

ಈ ಸಮಯದಲ್ಲಿ ಕಲ್‌ಬರ್ಗಿಯವರು ಕೇವಲ ಹಗೆ ತನವ ಆಟೋಪವನ್ನು ತೋರಿಸಲಾಗಿ, ಪಟ್ಟಣಕ್ಕೆ ಮುತ್ತಿಗೆ ಹಾಕಿ ಅದನ್ನು ತೆಗೆದುಕೊಳ್ಳುವುದೆಂದು ಆನೇಗೊಂದಿಯ ರಾಯರು ಸಾಳೋ ನರಸಿಂಗರಾಯನಿಗೆ ನಿರೂಪವನ್ನು ಬರೆಯಿಸಿದರು. ಅದರಂತೆ ಆತನು ಹೋಗಿ ಆ ಪಟ್ಟಣವನ್ನು ಮುತ್ತಿದನು. ಆದರೆ ಕೋಟೆಯೊಳಗಿನ ದಳಪತಿಯು ಘಟಕನಾದ್ದರಿಂದ ಅವನ ಮೇಲೆ ನರಸಿಂಗರಾಯನ ಕೈ ಏನೂ ನಡೆಯಲಿಲ್ಲ. ಈ ಕಾರಣದಿಂದ ಆನೇಗೊಂದಿಯ ರಾಜರು ತಿಮ್ಮಂಣನಾಯಕನಿಗೆ "ನಿಮ್ಮ ಕೈ ನೋಡಬೇಕೆಂದಿದೇವೆ, ನೀವು ಕಲ್‌ಬರ್ಗಿಗೆ ಹೋಗಿ ಆ ವೂರನ್ನು ಲಗ್ಗೆಹಾಕಿ ತೆಗೆದುಕೊಳ್ಳುವುದು," ಎಂದು ನಿರೂಪವನ್ನು ಬರೆಯಿಸಿದರು. ಅದಕ್ಕೆ ತಿಮ್ಮಂಣನಾಯಕನು "ಸಾಳೋ ನರಸಿಂಗರಾಯರು ಕಲ್‌ಬರ್ಗಿಗೆ ಮುತ್ತಿಗೆಹಾಕಿ ೬ ತಿಂಗಳಾಯಿತು, ಇನ್ನೂ

ಅದನ್ನು ಸಾಧಿಸಲಿಲ್ಲ, ದೇವರು ನನ್ನ ಕೈ ನೋಡಬೇಕಾದರೆ ನಾನು ಕಲ್‌ಬರ್ಗಿಯನ್ನು ತೆಗೆದುಕೊಳ್ಳಲು ಆಸ್ಪದ ಕೊಡಬೇಕು ; ಆವೂರನ್ನು ನಾನು ತೆಗೆದುಕೊಳ್ಳುವ ವರೆಗೂ ತಮ್ಮ ದರ್ಶನಕ್ಕೆ ಬರಲಾರೆ" ಎಂದು ಉತ್ತರ ಬರೆಯಿಸಿದನು. ಹಾಗೇ ಮಾಡಬಹುದೆಂದು ರಾಯರು ಅಪ್ಪಣೇಕೊಟ್ಟರು. ಇದರಂತೆ ಶಕ ೧೪೦೪ನೇ ಚಿತ್ರಭಾನು ಸಂ|| ವೈಶಾಖ ಮಾಸದಲ್ಲಿ ತಿಮ್ಮಣ್ಣನಾಯಕನು ತನ್ನ ಮಗ ಮದಕರಿ ಎಂಬ ಬಿರುದುಳ್ಳದಧ್ಯನ್ನದ ಓಬಳಣ್ಣ, ದೊಡ್ಡಣ್ಣ, ಗುಲುಪಿನಾಯಕ, ಇನ್ನೂಕೆಲವುಮಂದಿಯನ್ನೂ ಸಹಾ ದುರ್ಗದಲ್ಲಿ ಇಟ್ಟು ತನ್ನ ಸಂಗಡ ಅಂಣಾಗಾರ ಓಬಳಂಣ ಮತ್ತು ೨೦೦೦ ಮಂದಿಯನ್ನೂ ಸಹಾ ತೆಗೆದುಕೊಂಡು ತನ್ನ ಮನೆದೇವರಿರುವ ನೀರು ತಡಿಗೆ ಹೊರಟು ಬಂದು ಶ್ರೀರಂಗನಾಥಸ್ವಾಮಿಯಸೇವೆಮಾಡಿ ಕಲ್‌ಬರ್ಗಿಗೆ ಹೋದನು. ಅಲ್ಲಿ ಸಾಳೋನರಸಿಂಗರಾಯರನ್ನುಕಂಡು ಮಾತನಾಡಿ ಅವರ ಮುತ್ತಿಗೆ ತೆಗೆಯಿಸಿ-ಕಲ್‌ಬರ್ಗಿಯನ್ನು ಲಗ್ಗೆಗೆ ತೆಗೆದುಕೊಳ್ಳುತ್ತೇನೆ, ಅಪ್ಪಣೆ ಕೊಡಿಎಂದು ಕೇಳಿದನು. ಇದಕ್ಕೆ ನರಸಿಂಗರಾಯನು ಒಪ್ಪಿ ಅಪ್ಪಣೆಕೊಟ್ಟನು.

**ಕಲ್‌ಬರ್ಗಿಮುತ್ತಿಗೆ.**

ಆಗ ದುರ್ಗದ ನಾಯಕನು ಅರಳೆ ನಗ ೨೦೦೦ ಮೂಟೆಯನ್ನು ತರಿಸಿ ಕೊಂಡು ಕಲ್‌ಬರ್ಗಿಯ ಅಗಳಿಗೆ ಹಾಕಿಸಿ ಜ್ಯೇಷ್ಠ ಶು || ೫ ದಿವಸ ಬೆಳಗಿನ ಜಾವಕ್ಕೆ ಯುದ್ಧಕ್ಕೆ ಆರಂಭಿಸಿದನು. ಮಂದಿ ಮತ್ತು ಅಂಣಾಗಾರ ಓಬಳಂಣ, ಇವರು ಬಂದು ನಿಟ್ಟಿಗೂ, ಉಳಿದ ಕೆಲವು ಮಂದಿ ಮತ್ತು ಪಾಳಯಗಾರ ಬಂದು ನಿಟ್ಟನೂ ನಿಂತು ಲಗ್ಗೆಹತ್ತಿ ಸುರ್ಯೋದಯವಾದ ಅರೆಗಳಿಗೆಗೆ ಕೋಟೆಯನ್ನು ತೆಗೆದುಕೊಂಡರು ತಿಮ್ಮಂಣನಾಯಕನ ಕಡೇ ಜನರು ಊರೊಳಗೆ ಜನರನ್ನು ಕಡಿದ ರಕ್ತವು ಊರಬಾಗಿಲಲ್ಲಿ ಮೊಣಕಾಲು ಮಟ್ಟ ಹರಿಯಿತು. ಆಗ ಸಾಳೋ ನರಸಿಂಗರಾಯನು ಬಂದು-ಇಲ್ಲಿಗೆ ಸಾಕುಮಾಡಿ ಎಂದು ತಿಮ್ಮಂಣ್ಣನಾಯಕನನ್ನು ಕರೆದುಕೊಂಡುಹೋಗುವಾಗ ಧರ್ಮಕ ಹಳೆಯನ್ನು ಹಿಡಿಸಿದರು. ಕೋಟೆ ಶಾಣ್ಯವಾದ ವಿಷಯವನ್ನು ಗೋವಿಂದರಾಯರಿಗೆ ಬಿನ್ನವತ್ತಳೆ ಬರೆದು ಕಳುಹಿಸಲಾಗಿ ಆತನು ತಿಮ್ಮಂಣನಾಯಕನನ್ನು ವಿಜಯನಗರಕ್ಕೆ ಕರೆದು ಕೊಂಡ

ಹೋಗಿ ರಾಯರ ಭೇಟಿಮಾಡಿಸಿದನು. ಆಗ ರಾಯರು ಬಹು ಪ್ರೀತಿಯಿಂದ ಕಂಡು ೩ ತಿಂಗಳವರೆಗೂ ದುರ್ಗದ ಪಾಳಯಗಾರನನ್ನು ಇರಿಸಿಕೊಂಡಿದ್ದು ಚಿನ್ನದ ಮುಲಾಮಿನ ದೊಡ್ಡಶಂಖಚಕ್ರದ ಜೊತೆ ೧ ಅಂದಳಮತ್ತು ಮೊಸಳೆ ಬಾಯಿ ಜೋಡು ೧, ಫಿರಂಗಿ೧, ಸತ್ತಿಗೆ೧, ಚಿನ್ನದ ಹಸ್ತ೧, ಹಗಲದೀವಟಿಗೆ ೧, ಮತ್ತು ಉಡುಗರೆ ಸಹಾಕೊಟ್ಟು "ಹಗಲು ಗೊಲೇಮಾನ್ಯಾ" ಎಂದು ಹೊಗಳಲು ಭಟರನ್ನು ಕೊಟ್ಟು ದುರ್ಗಕ್ಕೆ ಕಳುಹಿಸಿದನು.

ಕ್ಷುದ್ರದ ಫಲ, ನಿರ್ಯಾಣ.

ಈಪ್ರಕಾರ ತಿಮ್ಮಣ್ಣನಾಯಕನು ದುರ್ಗದ ನಾಯಕತನವನ್ನು ಮಾಡಿಕೊಂಡು ಇರಲಾಗಿ, ಇವನ ಮೇಲೆ ಕೆಲವು ಕೆಟ್ಟ ಜನರು ಕ್ಷುದ್ರಹೇಳಿದ್ದರಿಂದ ವಿಜಯನಗರದ ರಾಯರು ಬೇಸರಗೊಂಡು ತಿಮ್ಮಣ್ಣನಾಯಕನನ್ನು ಕರೆಯಿಸಿ ಸೆರೆಯಲ್ಲಿಟ್ಟು, ಅವನ ಕಡೆ ಅಣ್ಣಗಾರ ಓಬಳಣ್ಣ, ದಾದನಾಯಕ ಮತ್ತು ಇತರ ಮಂದಿಯುನ್ನೂ ಸಹಾ ಅಂಕೆಯಲ್ಲಿಟ್ಟರು. ಆಗ ತಿಮ್ಮಣ್ಣ ನಾಯಕನು ಅಣ್ಣಗಾರ ಓಬಳಣ್ಣ ದಾದನಾಯಕ ಮುಂತಾದವರಿಗೆ ರಸಸಿದ್ಧರಿಂದ ಪ್ರಸಾದವಾಗಿ ತನಗೆ ಬಂದಿದ್ದ ದೆಸೆಗೆಟ್ಟನ ವಿಭೂತಿ, ಬಿಲ್ಲಿನ ದಟ್ಟಿ, ಕೈ ಅಂಬು ಸಹಾಕೊಟ್ಟು, ತನ್ನ ಕೋರಿಕೆಯನ್ನು ನೆರವೇರಿಸಬೇಕೆಂದು ಹೇಳಿ ಅವರನ್ನು ದುರ್ಗಕ್ಕೆ ಕಳುಹಿಸಿದನು. ಇವರು ತಮ್ಮ ತಲೆಯನ್ನು ತಪ್ಪಿಸಿಕೊಂಡು ದುರ್ಗಕ್ಕೆ ಬಂದು ಸೇರಿದರು. ತಿಮ್ಮಣ್ಣನಾಯಕನು ರಾಜಾಜ್ಞೆಯನ್ನು ಮೀರಬಾರದೆಂತ ವಿಜಯನಗರದಲ್ಲಿಯೇ ಇದ್ದು ಮರಣಹೊಂದಿದನು.

ಆತನ ಮರಣಕಾಲದಲ್ಲಿ ಅವನ ಬಳಿಯಲ್ಲಿಯೇ ಇದ್ದ ಮಗನಾದ ಓಬಳಣ್ಣನಾಯಕನು ತಮ್ಮ ತಂದೆಯ ಶವವನ್ನು ದಹನ ಮಾಡಿ ತುಂಗಭದ್ರಾನದಿಯನ್ನು ಕಾಣಿಸಿ, ಉತ್ತರ ಕ್ರಿಯಾದಿಗಳನ್ನು ಮಾಡಿ, ತಂದೆಯ ಅಸ್ಥಿಯನ್ನು ತೆಗೆದುಕೊಂಡು ಯಾರೂ ಅರಿಯದಂತೆ ತಪ್ಪಿಸಿಕೊಂಡು ದುರ್ಗಕ್ಕೆ ಬರುತಾ ದಾರಿಯಲ್ಲಿ ಮತ್ತಿ ಗ್ರಾಮದೊಳು ಗುಡ್ಡೆಮಾಡಿಸಿದನು.

ಶ|| ೧೪೯೧ ನೇ ಸರ್ವಧಾರಿ ಸಂ|| ಮಾಘ ಬಹುಳ ೬ ಯಲ್ಲು ಓಬಳಣ್ಣನಾಯಕ, ದಾದನಾಯಕ, ಇವರು ವಿಜಯನಗರದಿಂದಹೊರಟು

ಬೆಳಗನೂರು ಗ್ರಾಮಕ್ಕೆ ಬಂದರು. ಈ ಗ್ರಾಮದಗೌಡ ಗಿರಿಯಂಣನು ಇವರನ್ನು ತನ್ನ ಮನೆಯಲ್ಲಿ ನಾಲ್ಕುದಿವಸ ಇರಿಸಿಕೊಂಡಿದ್ದು ಉಪಚಾರವಮಾಡಿ ತನ್ನ ಕಡೆ ಮನುಷ್ಯರನ್ನು ಕೊಟ್ಟು ಅವರನ್ನು ದುರ್ಗಕ್ಕೆ ಕಳುಹಿಸಿದನು. ಆಗ ಓಬಳಂಣನಾಯಕನು ಹಡವನ ಹಾಳಿಗೆ ವಳತವಾದ ಕಾಳಲಗಟ್ಟೆ ಎಂಬ ಗ್ರಾಮದ ಭೂಮಿಯನ್ನು ೩೦೦ ವರಹಕ್ಕೆ ಕ್ರಯಕ್ಕೆ ತೆಗೆದುಕೊಂಡು, ಗ್ರಾಮ ಕಟ್ಟಿಸಿ ಆ ಸ್ಥಳದ ಗೌಡಿಕೆಯನ್ನು ಈ ಗಿರಿಯಂಣನಿಗೆ ಕೊಟ್ಟನು. ತರುವಾಯ ಗಿರಿಯಂಣನು ಹಡವನ ಹಾಳಿನಲ್ಲಿ ಒಂದು ಮನೆ, ದುರ್ಗದಲ್ಲಿ ಒಂದುಮನೆ ಸಹಾ ಮಾಡಿಕೊಂಡು ಇರುತಿದ್ದನು. ಓಬಳಂಣನಿಗೆ ದುರ್ಗದ ನಾಯಕತನವನ್ನೂ ದೊಡ್ಡಂಣನಿಗೆ ಉಚ್ಚಂಗೀ ದುರ್ಗದ ನಾಯಕತನವನ್ನೂ ವಿಜಯನಗರದ ರಾಜರ ಕಾಲದಲ್ಲಿ ಕೊಟ್ಟರು.

---

## ೪ ನೇ ಅಧ್ಯಾಯ.

### ೨ನೇ ದೊರೆ ಓಬಳಂಣನಾಯಕ

ಶ॥ ೧೫೧೦ ನೇ ಸರ್ವಧಾರಿ ಸಂ॥ ದಿಂದ ೧೫೨೫ ನೇ

ಶೋಭಕೃತುಸಂ॥ ದವರೆಗೆ.

ಓಬಳಂಣನಿಗೆ ಪಟ್ಟಾಭಿಷೇಕ.

ಈ ಓಬಳಂಣನಾಯಕನು, ವಿಜಯನಗರದಿಂದ ದುರ್ಗಕ್ಕೆ ಬಂದ ಮೇಲೆ ಸಿದ್ಧರು ಇವನ ಮೇಲಿನ ಅಭಿಮಾನದಿಂದ ಇವನಿಗೆ "ಮದಕರಿನಾಯಕ" ಎಂದು ಬಿರುದನ್ನು ಕೊಟ್ಟರು. ಇದು ಉಚ್ಚಾರಣೆಯಲ್ಲಿ ಕೆಟ್ಟು ಮದಕೆರಿನಾಯಕ ಎಂದಾಯಿತು, ಎಂದು ತೋರುತ್ತೆ. ಈ ಸಿದ್ಧರು ನಾಗತೇರ ಹರವಿನಲ್ಲಿಯೂ, ಕಿನ್ನರಿ ಕಲ್ಲಿನಲ್ಲಿಯೂ, ಬಾಳೇಕಾಯಿ ಸಿದ್ಧೇಶ್ವರನ ಗುಡಿಯಲ್ಲಿಯೂ, ಮಲಗಿರುತಾ ಯಾರೂ ಕಾಣದ ಹಾಗೆ ಮಾಯ

ವಾದರಂತೆ. ಎರಡು ವರುಷದಮೇಲೆ ಯಾರೂ ಕಾಣದಹಾಗೆ ಬಂದು ಸಂಪಿಗೇ ಸಿದ್ಧೇಶ್ವರನ ಗುಡಿಯಲ್ಲಿ ತಮ್ಮ ಆವಿಗೆಯನ್ನು ಬಿಟ್ಟಿದ್ದಹಾಗೂ, ಈ ಆವಿಗೆಯು ಸಿದ್ಧರದೇ ಎಂದು ಗುಂಟನೂರಲ್ಲಿದ್ದ ಓಬಳಂಣನಾಯಕರಿಗೆ ವರ್ತಮಾನ ಬಂದಹಾಗೂ ಹೇಳುವರು. ಆದೊರೆಯು ಬಂದು ಆವಿಗೆಗಳನ್ನು ಪೂಜೆಮಾಡಿ ಮೂರು ಸೋಮವಾರಅಲ್ಲಿಯೇ ಇದ್ದು ಪೂಜಾರಿ ಮಹಂತಮಲ್ಲಯ್ಯನಮನೆಯಲ್ಲಿ ಮಲಗಿರಲಾಗಿ, ಈ ಸಿದ್ಧರು ಯಾರೂ ಕಾಣದಹಾಗೆ ಬಂದು ನೆಲದಮೇಲೆ ಕುಳಿತಿದ್ದರಂತೆ; ಓಬಳಂಣನಾಯಕನು ಎಚ್ಚೆತ್ತು ನೋಡಿ, ಸಿದ್ಧರು ನೆಲದ ಮೇಲೆ ಕೂತಿದ್ದದನ್ನು ಕಂಡು–ಸ್ವಾಮಿ, ನನ್ನ ತಪ್ಪನ್ನು ಪಾಲಿಸಬೇಕೆಂದು ಅವರ ಪಾದಕ್ಕೆ ಬಿದ್ದನು. ಅಷ್ಟರಲ್ಲಿ ಸಿದ್ಧರು ಮಾಯವಾದರು. ಮತ್ತೆ ಈ ಮದಕರಿನಾಯಕ (ಮೆದಕೇರಿ ಎಂಬ ಓಬಳಂಣನು) ಸೋಮವಾರದ ಸೇವೆಗೆ ಬಂದು ದೇವರ ಸೇವೆಯನ್ನು ಮಾಡಿ ಸಿದ್ಧರಮೇಲಿನ ಪದಗಳನ್ನು ಹೇಳುತಾ ಕೋಲುಗಳನ್ನು ಹುಯ್ಯುತಾ ಮಲ್ಲಿದೇವಿಗುಡಿಯಲ್ಲಿ ಮಲಗಿರಲು, ಸಿದ್ಧರು ಬಂದು ಪ್ರತ್ಯಕ್ಷರಾದರು. ಓಬಳಂಣನು ಅವರಿಗೆ ಅಡ್ಡಬಿದ್ದು ಕೈಮುಗಿದು ನಿಂತುಕೊಂಡು–ಸ್ವಾಮಿ ಇಷ್ಟು ದಿವಸ ಎಲ್ಲಿ ಹೋಗಿದ್ದಿರಿ ಎಂದು ಕೇಳಲಾಗಿ, ನಾವು ಈ ಗುಡಿಯಲ್ಲಿರುವ ಹುಣಿಸಿನ ಮರದಲ್ಲಿ ಇಂದು ಮೊದಲು ಫಲಾಹಾರಮಾಡಿಕೊಂಡಿರುತ್ತೇವೆ ಎಂದು ಹೇಳಿ ಹೊರಟುಹೋದರಂತೆ. ಈಚೆಗೆ ಭರಮಪ್ಪನಾಯಕನ ದಿವಸದಲ್ಲಿ ಈ ಮರದಿಂದ ರಕ್ತದಹಾಗೆ ಸೋನೆ ಸುರಿದು ಮರಬಿದ್ದು ಹೋಯಿತು, ಎಂದು ಹೇಳುತಾರೆ. ಈ ಮಧ್ಯೆ ವಿಜಯನಗರದ ರಾಜ್ಯಪೂರ್ತಿಯಾಗಿ ಹೋಯಿತು.

ಸಿದ್ಧರ ಮಹಿಮೆ

ಶ॥ ೧೫೧೧ ನೇ ವಿರೋಧಿ ಸಂ॥ ದಲ್ಲಿ ಓಬಳಂಣ ನಾಯಕನಿಗೆ ಪಟ್ಟವಾಯಿತು. ಇವನಿಗೆ ಬಿಚ್ಚು ಫಿರಂಗಿ ಹಿಡಿಸಿದರು, ಇವನು ದುರ್ಗದ ಸೀಮೆಯನ್ನು ಸ್ವತಂತ್ರವಾಗಿ ಆಳಲು ಆರಂಭಿಸಿದನು. ವಿಜಯನಗರದವರ ಅಧಿರಾಜತ್ವ ಈ ಸೀಮೆಯಮೇಲೆ ಇಲ್ಲಿಗೆ ನಿಂತಹಾಗಾಯಿತು. ಜಯ ಸಂ॥ ದಲ್ಲಿ ಗುಂಟನೂರ ಮಲ್ಲಪ್ಪನಿಗೆ ಪ್ರಧಾನಿತನವಾಯಿತು.

ವಿಜಯನಗರದವರ ಅಧಿರಾಜತ್ವ ನಿಂತು ಹೋದದ್ದು.

ರಾಣಿಕನಕವ್ವನಸ್ಥೈರ್ಯ.

ಈ ಮದಕರಿನಾಯುಕನಿಗೆ ಕನಕಗಿರಿ ರಂಗಪ್ಪನಾಯಕನ ಮಗಳು ಕನಕವ್ವನನ್ನು ತಂದು ಮದುವೆಯಾಯಿತು. ಋತು ಶಾಂತಿಗಾಗಿ ಅಂತಃಪುರದಲ್ಲಿ ಪ್ರವೇಶಮಾಡಲು, ಆಕೆ ಬಹಳ ಸಿಟ್ಟುಮಾಡಿ—ನಾನು ನಿನಗೆ ದಕ್ಕುವಳಲ್ಲ, ನಾನು ದುರ್ಗಾ ದೇವಿ, ನನ್ನನ್ನು ಶಿಲಾ ಪ್ರತಿಮೆಮಾಡಿ, ವರುಷವರುಷಕ್ಕೂ ೧೦೧ ಕುರಿ ಕೋಣಗಳಿಂದ ಬಲಿ ಕೊಡಿಸಿ ಕ್ರಮಗೊಂಡು ಪೂಜೆ ಮಾಡಿದಲ್ಲಿ, ನಿನ್ನ ದೌಲತ್ತು ಬಡಾಯಿಸುತ್ತೆ, ಇಲ್ಲದೇ ಇದ್ದಲ್ಲಿ ನಾಶವಾದೀತು, ಎಂದು ಹೇಳಿ ಸತ್ತುಹೋದಳಂತೆ. ಇವಳ ಹೆಣವನ್ನು ದಹನಮಾಡಿಸಿ, ಕಲ್ಲು ಕಂಬದಮೇಲೆ ಪ್ರತಿಮೆಮಾಡಿಸಿ ಏಕನಾಥಮ್ಮನ ಗುಡೀಮುಂದೆ ಸ್ಥಾಪನೆಮಾಡಿ ಕಂಬದಮ್ಮ ಎಂದು ಹೆಸರಿಟ್ಟು ಪ್ರತಿವರುಷದಲ್ಲಿಯೂ ಸೇವೆ ನಡಿಸುತಾಬಂದರು. ತಿಂಮ್ಮಣನಾಯಕನ ಮಗಳು ಹೊನ್ನವ್ವನನ್ನು ದಾದನಾಯಕನಿಗೆ ಕೊಟ್ಟು ಮದುವೆಯಾಯಿತು. ಈಕೆಗೆ ಉಚ್ಚಂಗೀ ದುರ್ಗವನ್ನು ಬಳುವಳಿಯಾಗಿ ಕೊಟ್ಟರು. ಈ ಮದಕರಿನಾಯಕನೆಂಬ

ಓಬಳಂಣ ಸ್ವರ್ಗಸ್ಥನಾದ್ದು.

ಓಬಳಂಣನಾಯಕನು ಶೋಭಕೃತು ಸಂ॥ ದಲ್ಲಿ ಸ್ವರ್ಗಸ್ಥನಾದನು. ಇವನ ಅಸ್ಥಿಯನ್ನು ಈತನ ಮಗ ಕಸ್ತೂರಿರಂಗಪ್ಪನಾಯಕನು ಹಡವನಹಾಳಲ್ಲಿ ಸ್ಥಾಪನೆಮಾಡಿಸಿ ಅಲ್ಲಿ ಸಮಾಧಿಮಾಡಿಸಿದನು. ಇವನ ಸಂಗಡ ೫ ಜನ ನಾಗತಿಯರು ಸಹಗಮನ ಮಾಡಿದರು. ಇಬ್ಬರು ನಾಗತಿಯರು ಉಳಿದು ಕೊಂಡರು.

ಇವನ ಆಳಿಕೆಯಲ್ಲಿ ಆದ ಧಾರಿಕಟ್ಟಡ.

ಈ ಮದಕರಿನಾಯಕನು ತನ್ನ ಉಂಬಳಿಗ್ರಾಮವಾದ ಹುಲ್ಲೂರಲ್ಲಿ ಕೆರೆಯನ್ನೂ ಪುರದ ಸೀಮೆಯಲ್ಲಿ ಗುಂಡೀ ಕೆರೆಯನ್ನೂ ಮಾಡಿಸಿದನು. ಇವನ ಕಾಲದಲ್ಲಿ ದುರ್ಗದಲ್ಲಿ ದೊಡ್ಡಂಣನ ಕೆರೆಯನ್ನು ದೊಡ್ಡ ತಿಮ್ಮಂಣನಾಯಕ ಮಾಡಿಸಿದನು.

## ೫ ನೇ ಅಧ್ಯಾಯ.

### ೩ನೇ ದೊರೆ ಕಸ್ತೂರಿ ರಂಗಪ್ಪನಾಯಕ.

ಶ॥ ೧೫೬೫ ನೇ ಶೋಭಕೃತು ಸಂ॥ ದಿಂದ ೧೫೭೪ ನೇ ನಂದನ ಸಂ॥ ದ ವರೆಗೆ.

೩ನೇ ದೊರೆ ಕಸ್ತೂರಿ ರಂಗಪ್ಪನಾಯಕನಿಗೆ ಪಟ್ಟ.

ಮದಕರಿ ಓಬಳಣ್ಣನಾಯಕನ ಮಗ ಕಸ್ತೂರಿ ರಂಗಪ್ಪನಾಯಕನಿಗೆ ಶ॥ ೧೫೬೫ ನೇ ಶೋಭಕೃತು ಸಂ॥ ಆಷಾಢ ಶು॥ ೫ರಲ್ಲೂ ಪಟ್ಟವಾಯಿತು. ಈ ಕಸ್ತೂರಿ ರಂಗಪ್ಪನಾಯಕನು ಹಡವನಹಾಳಲ್ಲಿ ನಾಲ್ಕು ವರುಷ ಇದ್ದು ಶ॥ ೧೫೬೮ ನೇ ಪರಾಭವ ಸಂ॥ ದ ಮಾರ್ಗಶಿರ ಶು॥ ೧೧ ಗುರುವಾರ ರಂಗಪಟ್ಟಣವನ್ನು ಕಟ್ಟಿಸಲು ಆರಂಭಿಸಿ ಇದೇ ಸಂ॥ ದ ಮಾಘ ಮಾಸದಲ್ಲಿ ಪೂರ್ತಿಮಾಡಿದನು. ಈ ಸಂ॥ ದಲ್ಲಿ, ಜೆಲ್ಲಹಳ್ಳಿಯವರ ಹೆಂಣುಮಗಳು ಓದೋ ತಿಮ್ಮವ್ವನಾಗತಿಯನ್ನು ಕೊಟ್ಟು ದೊರೆಗೆ ಮದುವೆಯಾಯಿತು. ಶ॥ ೧೫೫೪ ನೇ ಆಂಗೀರಸ ಸಂ॥ ವೈಶಾಖ ಮಾಸದಲ್ಲಿ

ತರಿಕೆರೆಯವರ ಗಾಗಳ.

ತರೀಕೆರೆ ಪೂವಲ ಹನುಮಪ್ಪನಾಯಕನು ದಂಡಿನೊಡನೆ ಬಂದು ದುರ್ಗದ ಸೀಮೆಗೆ ಸೇರಿದ ದೇವಪುರದ ಕೋಟೆ, ಜಾನಕಲ್ಲುದುರ್ಗ, ಹೊಳಲಕೆರೆ, ಮಾಯಕೊಂಡ, ಚಿತ್ರಹಳ್ಳಿ, ಈ ಗಡಿಗಳಿಗೆ ಮುತ್ತಿಗೆ ಹಾಕಿ ತೆಗೆದುಕೊಂಡದ್ದೂ ಅಲ್ಲದೆ ರಂಗಪಟ್ಟಣವನ್ನು ಮುತ್ತಿ ಲಗ್ಗೆಯಿಂದ ತೆಗೆದುಕೊಂಡನು. ಆಗ ಕಸ್ತೂರಿ ರಂಗಪ್ಪನಾಯಕನು ನಾಗತಿಯರನ್ನು ಕರೆದುಕೊಂಡು ಬೊಕ್ಕಸದೊಡನೆ ನೂಲೋಕಣಿವೆಯಲ್ಲಿ ಹಾಯಿದು ದುರ್ಗಕ್ಕೆ ಬಂದನು. ಶ॥ ೧೫೫೫ ಕ್ಕೆ ಸಲ್ಲುವ ಶ್ರೀಮುಖ ಸಂ॥ ದಲ್ಲಿ ದುರ್ಗದ ಅರಮನೆಯನ್ನು ಕಟ್ಟಿಸಿದನು. ಮತ್ತು ಭಾವ ಸಂ॥ ದಲ್ಲಿ ಅರಮನೆ ಸುತ್ತಿನ ಕೋಟೆಯನ್ನು ಕಟ್ಟಿಸಿದರು. ಆಗ ತರೀಕೆರೆಯವರು ದುರ್ಗಕ್ಕೂ ಮುತ್ತಿಗೆಹಾಕಬೇಕೆಂದು ಆಡನೂರಬಳಿಯಲ್ಲಿ ಇಳಿದುಕೊಂಡರು.

ದೊರೆಗೆ ಜಯವಾದ್ದು.

ಇದನ್ನು ತಿಳಿದು ಕಸ್ತೂರಿ ರಂಗಪ್ಪನಾಯಕನು, ಆ ಶತ್ರುಗಳ ಮೇಲಿನ ಕಾರ್ಯಭಾಗಕ್ಕೆ ಮಾಘ ಶು॥ ೫ ಯಲ್ಲು ಹೊರಟು ಹುಲ್ಲೂರ ಬಳಿಯಲ್ಲಿಳಿದು, ತನ್ನ ಸಕಲ ಬಲವನ್ನೂ ಕರೆದು ಕೇಳಲಾಗಿ, ಆಗ ಬಿಳಿಚೋಡು ಬಾಲಯ್ಯ, ಬೆನ್ನೂರ ಸಿದ್ಧಯ್ಯ, ಹಿರಿ ಸೇರೋಗಾರ ಕೆಂಚಯ್ಯ, ಸಹಾ ತಂತಮ್ಮ ಮಂದಿಯೊಡನೆ ತಾವು ಹೋಗಿ ಬಾಣಗಳನ್ನು ಹಾಕಿ ಶತ್ರುಗಳನ್ನು ಹೊಡೆದುಬರುತೇವೆಂದು ಹೇಳಿದರು. ಆಗ ದೊರೆಯು—ನಿಮ್ಮ ಕಳುಹಿ ನಾವು ಎಲ್ಲಿರಬೇಕು, ಎಂದು ತಿಂಗಳಗಟ್ಟಲೆ ಕೈ ಜೀತದ ಮಂದಿಯನ್ನು ಕರೆದುಕೊಂಡುಹೋಗಿ ಕಂದವಾಡಿ ಗುಡ್ಡದಲ್ಲಿ ನಿಂತು ಇದೇ ಶು॥ ೧೦ ಗುರುವಾರದಲ್ಲೂ ಹಗೆಗಳ ದಂಡಿನಮೇಲೆ ಬಾಣಗಳ ಹಾಕಿ ಯುದ್ಧಮಾಡಿ ಜಯವನ್ನು ಹೊಂದಿದನು. ಡೊಂಕಪುರದ ಬಳಿ ಪುನಃ ಕದನವಾಯಿತು. ಅದರಲ್ಲಿಯೂ ಕಸ್ತೂರಿ ರಂಗಪ್ಪನಾಯಕನೇ ಜಯಶೀಲನಾದನು. ರಣರಂಗದಲ್ಲಿ ಮುಕ್ಕಣ್ಣಸುತ್ತು ಭಲ್ಯ, ಕಂಚಿನ ನಗಾರಿ ೪ ಜೊತೆ, ಕುದುರೆ ೫, ಇವು ಸಿಕ್ಕಿದವು. ತರೀಕೆರೆ ಹನುಮಪ್ಪನಾಯಕನು ಇವನ ಕಡೆ ೧೫ ಜನ ಸಮೇತವಾಗಿ ಕೈಸೆರೆ ಸಿಕ್ಕಿದನು, ಇವರನ್ನು ದುರ್ಗಕ್ಕೆ ತಂದು ೩ ತಿಂಗಳು ಇರಿಸಿಕೊಂಡು ಇದ್ದರು. ದೊರೆಗೆ ಮದಕರಿಯಣ್ಣ (ಸರ್ಜೆರಾಯ) ನೆಂಬ ಮಗಹುಟ್ಟಿ ಪುತ್ರೋತ್ಸವವಾಯಿತು. ಈಸಂತೋಷಕಾಲದಲ್ಲಿ ಸೆರೆಯಲ್ಲಿದ್ದ ಪೂವಲ ಹನುಮಪ್ಪನಾಯಕನನ್ನೂ ಇವನ ಕಡೆಮಂದಿಯನ್ನೂ ಸಹಾ ಸೆರೆಯಿಂದ ಧರ್ಮಕ್ಕೆ ಬಿಟ್ಟು ಬಿಟ್ಟರು. ಮತ್ತು ಶತ್ರುಗಳು ಹಿಡಿದಿದ್ದ ಗಡಿ ದುರ್ಗಗಳನ್ನು ಧಾತು ಸಂವತ್ಸರದಲ್ಲಿ ತಾವು ತೆಗೆದುಕೊಂಡು ವಶಮಾಡಿಕೊಂಡರು. ಈ ಕಾಲದಲ್ಲಿ ಈ ಕಸ್ತೂರಿ ರಂಗಪ್ಪನಾಯಕನು, "ಗಾದ್ರಿಮಲೆ ಹೆಬ್ಬುಲಿ" ಎಂತ ಬಿರುದಿನಿಂದ ಹೊಗಳಿಸಿಕೊಂಡನು.

ಚಿತ್ರಹಳ್ಳಿ ಜಯಿಸಿದ್ದು.

ತರುವಾಯ ಚಿತ್ರಹಳ್ಳಿ ನೀಲಯ್ಯನೆಂಬ ಗ್ರಾಮದ ಗೌಡನು, ತಾಕು ಮೇಕಿನಿಂದ ಹೆಮ್ಮೆ ಮಾತನಾಡಲಾಗಿ ಈಸಮಾಚಾರವನ್ನು ಕೇಳಿ ಕಸ್ತೂರಿ ರಂಗಪ್ಪನಾಯಕನು ಈ ಕೋ

ಟೆಯನ್ನು ಲಗ್ಗೆ ಮಾಡಿ ತೆಗೆದುಕೊಂಡು, ನೀಲಯ್ಯನನ್ನು ಹಿಡತರಿಸಿ ಅವನ ಹಲ್ಲನ್ನು ಕೀಳಿಸಿ ತಲೆಯನ್ನು ಒಡೆಯಿಸಿ ಸಮ್ಮಾಳಗೆಗೆ ಹಾಕಿಸಿ, ಆ ವೂರಿಗೆ ಠಾಣ್ಯ ಇಟ್ಟು ದುರ್ಗಕ್ಕೆ ಬಂದನು. ಇದೇ ಧಾತು ಸಂ|| ಶ|| ೧೫೯೮ ರಲ್ಲಿ ಹರಪನಹಳ್ಳಿಯವರಿಗೂ ಕಸ್ತೂರಿ ರಂಗಪ್ಪನಾಯಕನಿಗೂ ಯುದ್ಧವಾಗಿ ಚಿತ್ರದುರ್ಗದ ವೀರರೇ ಜಯವನ್ನು ಹೊಂದಿದರು.

ಅಳಿಯ ಸೀರ್ಯದ ಕೃಷ್ಣಪ್ಪನ ಸ್ವಾಮಿದ್ರೋಹ ತನ.

ಇದೇ ಸಂ|| ದಲ್ಲಿ ಸೀರ್ಯದ ರಂಗಪ್ಪನ ಕೃಷ್ಣಪ್ಪನಿಗೆ ಕಸ್ತೂರಿ ರಂಗಪ್ಪನಾಯಕನ ಮಗಳು ಓಬವ್ವನನ್ನು ಕೊಟ್ಟು ಮದುವೆಯಾಯಿತು. ಈ ಕುಮಾರತಿಗೆ ದುರ್ಗದಲ್ಲಿಯೇ ಅರಮನೆ ಮಾಡಿಕೊಟ್ಟು ಇರಿಸಿಕೊಂಡಿದ್ದರು. ಹೀಗಿರುವಲ್ಲಿ ಅಳಿಯ ಕೃಷ್ಣಪ್ಪನು ಸ್ವಾಮಿದ್ರೋಹಿತನದಿಂದ ತನ್ನ ಕಡೆ ಮಂದಿಯನ್ನು ಕರೆಯಿಸಿಕೊಂಡು ರಾತ್ರಿ ೮ ಗಳಿಗೆ ಕಾವಲಗಾರರ ಸಂಗಡ ಸೇರಿಕೊಂಡು, ಕಾವಲ ನೆಪ ಮಾಡಿಕೊಂಡು ಕೋಟೆ ತೆಗೆದುಕೊಳ್ಳುವ ಸನ್ನಾಹ ನಡಿಸುತಾ ಇರಲಾಗಿ, ನಡುವಣಬಾಗಿಲಲ್ಲಿ ರಾಜರ ಬಗೆ ಕಾವಲಮಂದಿಗಳು ಇವರನ್ನು ಕಂಡು ಬಾಗಿಲ ಕದಗಳ ಹಾಕಿ ಹಗೆಗಳನ್ನು ಮರ ಬಿಲ್ಲಿನಲ್ಲಿ ಇಟ್ಟು ಗುಲ್ಲುಮಾಡಿದರು. ಈ ಸಮಾಚಾರವು ಬಂಣದ ಚಾವಡಿಯಲ್ಲಿ ಮಲಗಿದ್ದ ಕುಮಾರ ಮದಕೇರಂಣ, ಬಾಣದ ಬೊಮ್ಮಯ್ಯ, ಹಿರೀಸೇರೋಗಾರ ಕೆಂಚಯ್ಯ, ಸರಳೆಮ್ಮೆ ಕಾಟಂಣ, ಬೆನ್ನೂರ ಚಿಕ್ಕಯ್ಯ, ಬಿಳಿಚೋಡಬಾಲಯ್ಯ, ಇತರ ಕಾವಲುಗಾರರು, ಇವರಿಗೆ ತಿಳಿಯಿತು. ಇವರು ಹೊರಟು ಕೋರೆಬಂಡೆ ದಿಡ್ಡಿಯೊಳಗೆಹಾದು ಮೇಲು ದುರ್ಗಕ್ಕೆ ಬಂದು ನಡುವಣಬಾಗಿಲಿನಿಂದಾ ಕಸ್ತೂರಿ ರಂಗಪ್ಪನಾಯಕರ ಬಾಗಿಲತನಕ ಕಾದಿದರು. ಅಲ್ಲಿಯವರೆಗೆ ರಕ್ತದಕೋಡಿ ಹರಿಯಿತು, ಕುಮಾರ ಮದಕೇರಂಣನು ತನ್ನ ಕೈಯ್ಯಲ್ಲಿದ್ದ ಗಂಡುಗೊಡಲಿಯಿಂದ ಲೆಕ್ಕವಿಲ್ಲದಷ್ಟು ಮಂದಿಯನ್ನು ಕಡಿದನು. ರಾಯನುತನ್ನ ಅರಮನೆಯಲ್ಲಿದ್ದು ಈವರ್ತಮಾನವನ್ನು ಕೇಳಿದನು. ಕುಮಾರ ಮದಕೇರಂಣನಿಂದ ದುರ್ಗಉಳಿಯಿತು, ಎಂದು ಎಲ್ಲರೂ ಹೊಗಳಿದರು. ರಾಯನು ಬಹಳ ಸಂತೋಷಪಟ್ಟು ಮಂದಿಗಳಿಗೆಲ್ಲಾ

ಮದಕೇರಂಣ (ಸರ್ಜಿರಾಯನ) ಪರಾಕ್ರಮ.

ಜನ ೧ಕ್ಕೆ ೨೦ವರಹಪ್ರಕಾರ ಇನಾಮುಕೊಟ್ಟು ದೇವರುಗಳಿಗೆ ಕಾಣಿಕೆ, ಮಾಸಲು ಸಹಾ ಕೊಟ್ಟು ಈ ಕುಮಾರ ಮದಕೇರಂಣನಿಗೆ "ಗಂಡುಗೊಡಲಿ ಸರ್ಜ" ಎಂದು ಹೆಸರುಕೊಟ್ಟನು. ಈ ಕೃಷ್ಣಪ್ಪನಾಯಕನು ಚೋರದಿಡ್ಡಿಯಲ್ಲಿ ಅಡಗಿಕೊಂಡಿದ್ದು ತಪ್ಪಿಸಿಕೊಂಡು ಹೋದನು. ಇವನು ಓಡಿಹೋಗಿ ಐಮಂಗಲದ ಹಿರೀಕೆರೆಯಲ್ಲಿ ಮೈತೊಳೆದುಕೊಂಡು ಹೋದ್ದನ್ನುಕಂಡುಬಂದು ಒಬ್ಬಮನುಷ್ಯನು ರಾಯನಿಗೆ ವರ್ತಮಾನ ತಿಳಿಸಿದನು. ಇವನಿಗೆ ೨೪೦ವರಹ ಇನಾಮು ಕೊಟ್ಟರು. ಈ ವೃತ್ತಾಂತವನ್ನು ಕಸ್ತೂರಿ ರಂಗಪ್ಪನಬಾಗಿಲ ಕಲ್ಲುಕಂಬದಮೇಲೆ ಬರೆದಿದೆ.

ಸೀರ್ಯದವರು ಹಿರಿಯೂರ ಮುತ್ತಿದ್ದು

ಶ| ೧೫೬೦ನೇ ಈಶ್ವರ ಸಂ|| ವಲ್ಲಿ ಸೀರ್ಯದ ರಂಗಪ್ಪನಾಯಕನು ಹಿರಿಯೂರಿಗೆ ಮುತ್ತಿಗೆ ಹಾಕಿದನು. ಹಿರಿಯೂರ ಕೆಂಚಣ್ಣನಾಯಕನು ಕಳ್ಳಭಂಟರ ಸಂಗಡ ತನ್ನ ನಾಗತಿಯರ ವೋಲೆಗಳ ಕೊಟ್ಟು ಕಳುಹಿಸಿದನು. ಕಸ್ತೂರಿರಂಗಪ್ಪನಾಯಕನು ಈ ಸಮಾಚಾರವನ್ನು ಕೇಳಿ ತಕ್ಷಣವೇಹೊರಟು ಕೂನನ ಕೆರೆ ಬಳಿಯಲ್ಲಿ ಇಳಿದು ಕೊಂಡನು. ಸೀರ್ಯದ ರಂಗಪ್ಪನಾಯಕನು ೧೨೦೦೦ ಕಾಲಾಳು ೩೦೦೦ ಕುದುರೆ ಸಹಾ ತನ್ನೊಡನೆ ಕರೆದುಕೊಂಡು ಬಂದಿದ್ದನು ಇದೇ ಈಶ್ವರ ಸಂ|| ಫಾಲ್ಗುಣ ಶು| ೧೨ ಸಾಯಂಕಾಲ ೨೫ ಗಳಿಗೆಗೆ ಜಗಳ ಮೊದಲುಮಾಡಿ ಬೆಳಗಾದ ಮೇಲೆ ೧೮ಗಳಿಗೆ ವರೆಗೆ ಕಾದಿದರು. ಸೀರ್ಯವರಂಗಪ್ಪನು ಗುಂಡು ತಗಲಿ ಮೃತನಾದನು. ಶತ್ರುಗಳ ಬಲ ಮುರಿದು ಮಸಗಲ್ಲ ಬಳಿ ನಿಂತಿತು. ಕಸ್ತೂರಿ ರಂಗಪ್ಪನಾಯಕನು ಬಲಸಹಿತ ಅವರ ಬೆನ್ನಹತ್ತಿ ಹೋಗಿ ಮುತ್ತಿಕೊಳ್ಳಲು ಅವರ ಬಗೆ ಭಟರು ಬಂದು ಹೊಗಳಿ "ದೊರೆಬಿದ್ದಮೇಲೆ ನಾವು ತಮಗೆ ಭಂಟರು, ಅವರಿಗೂಭಂಟರು. ನಮ್ಮಮೇಲೆಹಗೆ

ಜಯವಾದ್ದು.

ತನವೇಕೆ"? ಎಂದು ಹೇಳಿಕೊಂಡರು. ಅವರನ್ನು ಬಿಟ್ಟು ಅವರ ದೊರೆಯನ್ನು ಕೆಂಚಣ್ಣನಾಯಕನು ಹಿರಿಯೂರಿಗೆ ಕರೆದುಕೊಂಡು ಹೋದನು. ದೊರೆಯು ತೇರ ಮಲ್ಲೇಶ್ವರನ ಗುಡಿಯನ್ನು ಹೊಕ್ಕು ದೇವರ ದರ್ಶನವನ್ನು ಮಾಡಿಕೊಂಡು ಕೆಂಚಂಣನಾಯಕನ ಅರಮನೆಗೆ

ಹೋದನು. ಆ ಕೆಂಚಂಣನಾಯಕನ ನಾಗತಿಯರು ತಮ್ಮ ಓಲೆಯನು ತಟ್ಟೆಯಲ್ಲಿರಿಸಿ ಆರತಿ ಎತ್ತಿದರು. ಆಗ ಕಸ್ತೂರಿ ರಂಗಪ್ಪನಾಯಕನು ಆ ನಾಗತಿಯರಿಗೆ ೨೦೦೦ ವರಹ ಇನಾಮು ಕೊಟ್ಟನು. ಆಗ ಕೆಂಚಣ್ಣನಾಯಕನು ದುರ್ಗದ ದೊರೆಗೆ ೨೦೦೦ ವರಹ, ನೆಟ್ಟಫಿರಂಗಿ, ಉಡುಗರೆಸಹಾ ಕೊಟ್ಟು ರಾಜನನ್ನು ದುರ್ಗಕ್ಕೆ ಪ್ರಯಾಣ ಮಾಡಿಸಿ ಕಳುಹಿಸಿದನು.

ದೊರೆಯ ಮಕ್ಕಳ ಮದುವೆ.

ಆಗ ದೊರೆಯು ಚಿತ್ರದುರ್ಗಕ್ಕೆ ಬಂದು "ಶ್ರೀಮತ್ ಮಹಾನಾಯಕಾಚಾರ್ಯ ನಾಯಕಶಿರೋಮಣಿ ಕಾಮಗೇತಿ ಕಸ್ತೂರಿ ರಾಜ ಹಗಲು ಕಗ್ಗೊಲೆಮಾನ್ಯ ಗಾದ್ರಿ ಮಲೆ ಹೆಬ್ಬುಲಿ ಗಂಡುಗೊಡಲಿ ಸರ್ಜಸಂಸ್ಥಾನ ಚಿತ್ರದುರ್ಗ, ಮದಕರಿನಾಯಕರ ಕಸ್ತೂರಿರಂಗಪ್ಪನಾಯಕರು" ಎಂಬ ಹೆಸರಿನಿಂದ ಈಶ್ವರಸಂ|| ದಲ್ಲಿ ಇತರ ಪಾಳೆಯಗಾರರಿಗೆ ಲೇಖನಗಳನ್ನು ಬರಸಿದನು. ಬಹುಧಾನ್ಯ ಸಂ|| ದಲ್ಲಿ ಕೃಷ್ಣಪ್ಪನ ಮಗಳು ರಾಮವ್ವ ಬೆನ್ನೂರ ತಳವಾರನ ಮಗಳು ಓಬವ್ವ, ಇವರಿಬ್ಬರನ್ನೂ ಯುವರಾಜನಾದ ಸರ್ಜಿರಾಯನಿಗೂ, ಹಿರೀಸೇರುಗಾರ ಕೆಂಚಯ್ಯನ ಮಗಳನ್ನು ರಾಜಪುತ್ರನಾದ ಕುಮಾರಪ್ಪನಿಗೂ, ಬಾಣದವರ ಮನೆ ಓಬವ್ವನನ್ನೂ ಸಾದರಹಳ್ಳಿ ತಳವಾರನ ಮಗಳು ಈರವ್ವನನ್ನೂ ಮದಕರಿನಾಯಕನಿಗೂ ಕೊಟ್ಟು ಮದುವೆಯಾಯಿತು.

ಕಸ್ತೂರಿರಂಗಪ್ಪನಾಯಕನ ಮರಣ.

ಆರು ವರುಷದ ತರುವಾಯ ತಾರಣ ಸಂ||ರದ ಆಷಾಢ ಶು ೧೦ ಯಲ್ಲು ಸರ್ಜಿರಾಯನು ದೈವಾಧೀನನಾದನು. ಈ ದುಃಖದಲ್ಲಿಯೇ ಕೊರಗಿ ಕಸ್ತೂರಿ ರಂಗಪ್ಪನಾಯಕನು ಶ| ೧೫೭೪-೫ ನೇ ನಂದನ ಸಂ|| ಮಾರ್ಗಶಿರ ಶು|೧೪ ಯಲ್ಲು ಮೃತನಾದನು. ಈ ದೊರೆಯ ದೇಹವನ್ನು ಅರಮನೆಯಲ್ಲಿಯೇ ದಹನ ಮಾಡಿದರು. ಈತನ ಹೆಂಡಿರು ೭ಜನ ಸಹಗಮನ ಮಾಡಿದರು. ೫ಜನ ಉಳಿದುಕೊಂಡರು. ಈ ಪಾಳಯಗಾರನು ಆಳಿದ ಸೀಮೆ ೨೦ಕ್ಕೆ ಸಕಲ ಬಾಬೂ ಸಹಾ ೬೫೦೦೦ ಸುವರ್ಣಾದಾಯವಿತ್ತು.

# ೬ ನೇ ಅಧ್ಯಾಯ.

## ಇಮ್ಮಡಿ ಮದಕರಿನಾಯಕ.

ಶ| ೧೫೭೪-೫ ನೇ ನಂದನ ಸಂ| ದಿಂದ ಆನಂದ ಸಂ|| ದ ವರೆಗೆ ೨೦ ವರುಷ.

ಇಮ್ಮಡಿಮದಕರಿ ನಾಯಕ.

ಕಸ್ತೂರಿ ರಂಗಪ್ಪನಾಯಕನು ಜೀವಂತನಾಗಿರುವಾಗಲೇ ಹಿರೀ ಮಗ ಸರ್ಜೆರಾಯ ಎರಡನೇ ಮಗ ಕುಮಾರಪ್ಪ ಇವರಿಬ್ಬರೂ ತೀರಿ ಹೋಗಿದ್ದ ಕಾರಣ, ೩ನೇ ಮಗನಾದ ಇಮ್ಮಡಿಮದಕರಿನಾಯಕನಿಗೆ ಶ|| ೧೫೭೪—೫ ನೇ ನಂದನ ಸಂ|| ಮಾರ್ಗಶಿರ ಬ|| ೫ ಯಲ್ಲೂ ಸಂಪಿಗೇ ಸಿದ್ಧೇಶ್ವರನ ಗುಡಿಯಲ್ಲಿ ಪಟ್ಟಕಟ್ಟಿದರು. ಇದುವರೆಗೆ ಕಟ್ಟಿದ ಕೋಟೆಯೆಲ್ಲಾ ವಿಶೇಷವಾಗಿ ಬಲವಾಗಿಯೇ ಇದ್ದಾಗ್ಯೂ ಶತ್ರುಗಳ ಭೀತಿಯು ತಪ್ಪಿರಲಿಲ್ಲ. ಆದ್ದರಿಂದ ದುರ್ಬಲವಾಗಿದ್ದ ಕಡೆ ಬಲಮಾಡಲು ಟೀಕಿನಬಾಗಿಲು ಇದರ ಸುತ್ತಿನ ಕೋಟೆ, ಸಹಾ ಕಟ್ಟಿಸಿದರು. ಇದು ಜಯ ಸಂ|| ದಲ್ಲಿ ಮುಗಿಯಿತು. ವಿಜಯ ಸಂ|| ದಲ್ಲಿ ಇನ್ನೊಂದು ಯುದ್ಧಪ್ರಾರಂಭವಾಯಿತು.

ತರೀಕೆರೆಯವರಮುತ್ತಿಗೆ.

ಚಿತ್ರದುರ್ಗದ ವೀರರ ಏಳಿಗೆಯನ್ನು ನೋಡಿಸಹಿಸಲಾರದೆ ಸುತ್ತಲಪಾಳಯಗಾರರು ದಂಡಿನೊಡನೆ ಬಂದು ದೇವ ಪುರದ ಕೋಟೆಗೆ ಮುತ್ತಿಗೆ ಹಾಕಿದರು. ಅದೇ ಸಂ|| ಮಾರ್ಗಶಿರ ಶು|| ೫ ಯಲ್ಲು ಈ ಮುತ್ತಿಗೆಯನ್ನು ಎಬ್ಬಿಸುವುದಕ್ಕೆದುರ್ಗದ ಸೇನೆ ಹೊರಟು ಹೊರಕೆರೆ ದೇವರ ಪುರದ ಬಳಿ ಇಳಿದು ಮುಂದಕ್ಕೆ ದೇವ ಪುರದ ಕೋಟೆಯೊಳಕ್ಕೆಹೋಗಲಾಗಿ, ಹಗೆಗಳುದುರ್ಗದ ದಂಡನ್ನು ಸುತ್ತಿಕೊಂಡರು. ಆಗ ಸೇನಾಪತಿಗಳು ದೊರೆಯನ್ನುಕುರಿತು ನಮಗೆಅಪ್ಪಣೆಯಾದರೆ ನಾವುಶತ್ರುಸೇನೆಯನ್ನು ಹೊಡೆಯುತೇವೆ ಎಂದು ಕೇಳಿಕೊಳ್ಳಲು, ಅದಕ್ಕೆ ಮದಕರಿನಾಯಕನು—ನಾವೂ ನೀವೂ ಉಭಯರೂ ಒಟ್ಟಿಗೆ ನಿಂತಬಳಿಯಲ್ಲಿಯೇ ಜಗಳವಾಡಬೇಕು ಎಂದು

ದೊರೆಗೆ ಸೇನಾಪತಿಗಳುಕೊಟ್ಟ ಭರವಸೆ

ಅಪ್ಪಣೆ ಕೊಡಿಸಿದನು. ಅದಕ್ಕೆ ೧ ಬಿಳಿಚೋಡು ಹನುಮಯ್ಯ, ೨ ಬಾಣದಲಿಂಗಯ್ಯ, ೩ ಹಿರೀಸೇರುವೆಗಾರ ಕೆಂಚಯ್ಯ, ೪ ಸರಳೆಮ್ಮೆ ಕಾಟಯ್ಯ, ೫ ಅಪ್ಪರಸಯ್ಯ, ೬ ಸರಸಿಂಹಭಟ್ಟ, ೭ ಅಕ್ಕಸಾಲೆ ಕಂಠ ಮಾಲೆ ಮುಂತಾದವರು–ಸ್ವಾಮಿ, ತಾವು ಕೆಲವು ಮಂದಿಯನ್ನು ಬೆಂಗಾವಲಿಗೆ ಇಟ್ಟುಕೊಂಡು ಊರೊಳಗೆ ತವಕದ ಮೇಲೆ ಇರಬೇಕು, ಮತ್ತು ನಾವು ಮಾಡುವ ಊಳಿಗವನ್ನು ನೋಡಿಕೊಳ್ಳುತಿರಬೇಕು, ಎಂದು ಅರಿಕೆ ಮಾಡಿದರು. ಅದಕ್ಕೆ ದೊರೆಯು—ನಾವು ನಿಮ್ಮನ್ನು ಕಳುಹಿಸಿ ಊರಲ್ಲಿ ನಿಲ್ಲಬಾರದು ಎಂದು ಸಿಟ್ಟುಮಾಡಿ ಛಲದಂಕನೆಂಬ ಕುದುರೆಯನ್ನು ಏರಿ ರಸಸಿದ್ಧರು ಕೊಟ್ಟ ದೆಸೆಗಟ್ಟಿನ ದಾಳಿತನವನ್ನು ಧರಿಸಿಕೊಂಡು ಭಟ್ಟರಿಂದ ಹೊಗಳಿಸಿ ಕೊಳ್ಳುತಾ ತರೀಕೆರೆಯ ಪೂವಲವರ ದಂಡಿನ ಮೇಲೆ ಬಿದ್ದು ಶತ್ರು ಸೇನಾಪತಿಗಳಾದ ಚಿಕ್ಕಹನುಮಪ್ಪನಾಯಕ, ಪಟ್ಟಾಭಿರಾಮನಾಯಕ ಇವರ ಫೌಜಿನನೊಳಕ್ಕೆ ಹೊಕ್ಕು ಲಡಾಯಿ ಮಾಡಿ ಜಯಹೊಂದಿದನು. ಆಗ ತರೀಕೆರೆ ದಂಡು ಯಲ್ಲಂಬಳಸೆ ಬಳಿ ಹೋಗಿ ನಿಂತಿತು. ಚಿಕ್ಕ ಹನುಮಪ್ಪ ನಾಯಕನ ಕೈಯಲ್ಲಿದ್ದ ೧ನೆಟ್ಟ ಫಿರಂಗಿ, ೧ ಕಠಾರಿ, ೨೦ ಕುದುರೆ, ೧೫ ದೊಡ್ಡಗುಂಡಿನ ಕೋವಿ, ಇದೆಲ್ಲಾ ದುರ್ಗದವರಿಗೆ ಸಿಕ್ಕಿದವು. ದೊರೆಯು ಹೊಳಲ ಕೆರೆಯಮೇಲೆ ಹಾದು ಚಿತ್ರದುರ್ಗಕ್ಕೆ ಬಂದನು. ಈ ಸಂ॥ದ ಮಾಘಮಾಸದಲ್ಲಿ ಕೆಳಗಣ ಅರಮನೆ ಕಟ್ಟಿತು. ಮನ್ಮಥಸಂ॥ ದಲ್ಲಿ ಗಾರೇ ಬಾಗಿಲ ಸುತ್ತಿನ ಕೋಟೆ, ಕೊತ್ತಲಗಳು ಸಹಾ ಮುರಿದು ಕಟ್ಟಲ್ಪಟ್ಟವು. ಹೇವಿಳಂಬಿ ಸಂ॥ ದಲ್ಲಿ ಬಸಪ್ಪನ ಬುರುಜು ರಾಮದೇವರಗುಡಿ ಹಿಂದಿನ ಸುತ್ತು ಸಹಾ ತಯಾರ್ಮಾಡಲ್ಪಟ್ಟವು. ಪ್ಲವ ಸಂ॥ ದಲ್ಲಿ ಗೋಡೆ ಕೆರೆ, ನನ್ನಿವಾಳ, ಐಮಂಗಲ, ಪಾಳತಿ ಈ ಕೋಟೆಗಳನ್ನು ಮುತ್ತಿ ಠಾಣ್ಯಾಹಾಕಿದರು. ತರುವಾಯ ಶುಭಕೃತು ಸಂ॥ ದ ಮಾರ್ಗಶಿರ ಶುದ್ಧ ೮ ಶುಕ್ರವಾರದಲ್ಲು ಹಿರಿಯೂರು ಕೋಟೆಗೆ ಮುತ್ತಿಗೆ ಹಾಕಿದರು. ದೊರೆಗೆ ತೇರ ಮಲ್ಲೇಶ್ವರನ ಸ್ವಪ್ನವಾಯಿತಂತೆ. ಕೂಡಲೆ ಇಪ್ಪತ್ತು ದಿವಸದಲ್ಲಿ ಆ ಕೋಟೆಯನ್ನು ತೆಗೆದುಕೊಂಡರು. ಈ ಕಾಲದಲ್ಲಿ ಕಾಮಗೇತಿ ತಿಮ್ಮಣ್ಣನಾಯಕನ ಅರಮ

ಕೋಟೆ ಕೊತ್ತಳ ಕಟ್ಟಿಸಿದ್ದು.

ನೇಬಳಿಯಲ್ಲಿರುವ ಮದ್ದಿನ ಕಣಜ, ಪಚ್ಚೇದ ಕಣವೆ, ತುಪ್ಪದ ಕಣಜ, ಏಕನಾಥಮ್ಮನ ಗುಡಿ ಮುಂತಾದವನ್ನು ಕಟ್ಟಿಸಿದರು. ಜಡಕಲ್ಲು ದುರ್ಗದ ಗೌರವ್ವ ನಾಗತಿ ಎಂಬ ಹೆಂಣುಮಗಳನ್ನು ತಂದು ದೊರೆಗೆ ಮದುವೆಯಾಯಿತು.

ಮಕ್ಕಳಾಗಲು ದೇವರಿಗೆ ಹರಕೆ.

ಈ ಆಳಿಕೆಯಲ್ಲಿ ಗೋಡೇಕೆರೆಕೋಟೆ, ನನ್ನಿವಾಳ, ಐಮಂಗಲದ ಕೋಟೆ ಮೊದಲಾದ ಸೀಮೆಗಳನ್ನು ತೆಗೆದುಕೊಂಡರು. ದೊರೆಯಾದ ಮದಕರಿನಾಯಕನಿಗೆ ಮಕ್ಕಳಿಲ್ಲದ ಕಾರಣ ಶ॥ ೧೫೮೭-೮ ನೇ ವಿಶ್ವಾವಸು ಸಂ॥ ದಲ್ಲಿ ಉಚ್ಚಂಗಮ್ಮದೇವರ ಇದಿರೆತ್ತಿ ಸಕಲರೂ ದರ್ಶನಕಟ್ಟಿಕೊಂಡು ಬೇವನ್ನುಟ್ಟು ದೇವರ ಮಾಡಿದರು. ಮೂರನೇ ವೈಶಾಖ ಮಾಸದಲ್ಲಿ ದೊರೆಗೆ ಕೆಂಚವ್ವನೆಂಬ ಮಗಳು ಹುಟ್ಟಿದಳು. ಈ ಪಾಳಯಗಾರನು ತಮ್ಮ ತಾಯಿ ಓದೋತಿಮ್ಮವ್ವನ ಹೆಸರಿನ ಮೇಲೆ ಒಂದು ಕೆರೆ, ತಂದೆ ಹೆಸರಿನ ಮೇಲೆ ಅರಸನ ಕೆರೆ, ಜನಿಗೆ ಹಳ್ಳಕ್ಕೆ ಅಡ್ಡಕಟ್ಟೆ ಹಾಕಿ ತನ್ನ ಹೆಸರಿನಿಂದ ಒಂದು ಕೆರೆ, ಇವುಗಳನ್ನು ಕಟ್ಟಿಸಿದನು. ಪ್ಲವ ಸಂ॥ ದಲ್ಲಿ ಕೆಂಚಕ್ಕ ಎಂಬ ಮಗಳು ಮೃತವಾದ್ದರಿಂದ ಅವಳ ಜ್ಞಾಪಕಾರ್ಥವಾಗಿ ಒಂದು ಕೆರೆಯನ್ನು ಮಾಡಿಸಿದರು. ಶ॥ ೧೫೯೬-೭ನೇ ಆನಂದ ಸಂ॥ ಪುಷ್ಯ ಶುದ್ಧ ೧೫ ಯಲ್ಲಿ ಇಮ್ಮಡಿ ಮದಕರಿನಾಯಕನು ಈ ಲೋಕವನ್ನು ಬಿಟ್ಟನು ಈತನ ಅರಮನೆಯಲ್ಲಿಯೇ ಶವವನ್ನು ದಹನ ಮಾಡಿದರು ಇವನ ಸಂಗಡ ೨೩ ಜನ ಹೆಂಡಿರು ಸಹಗಮನ ಮಾಡಿದರು. ಮೂರು ಜನ ನಾಗತಿಯರು ಜೀವಂತರಾಗಿ ನಿಂತರು. ಈ ಆಳಿಕೆಯಲ್ಲಿ ಒಟ್ಟು ೧೦೦೦೦೦° ವರಹದ ಸೀಮೆ ಇತ್ತು. ಈ ಸೀಮೆಯನ್ನು ಭಾಗಗಳು ಮಾಡಿ ಅಲ್ಲಲ್ಲಿನ ಅಧಿಕಾರಕ್ಕೆ ಹೊಟ್ಟೆ ಗುರುಕಂಣ, ಕರಣೀಕ ಭೂನಪ್ಪ, ಅಬ್ಬಿಗೆರೆ ಮಲ್ಲಂಣ, ಕರಣೀಕ ಅಪ್ಪಂಣ, ಇವರುಗಳನ್ನು ನೇಮಿಸಿದರು. ಆಗ ೧ ದೇಶಂಣ, ೨ ರಂಗಪ್ಪ, ೩ ಕಾಟೇಹಳ್ಳಿ ಚಂದಂಣ, ಇವರು ದಳವಾಯಿಗಳಾಗಿದ್ದರು.

ಇಮ್ಮಡಿ ಮದಕರಿನಾಯಕನ ಮರಣ

## ೭ ನೇ ಅಧ್ಯಾಯ.

## ಓಬಂಣನಾಯಕ.

ಶ|| ೧೪೯೬ ನೇ ಆನಂದ ಸಂವತ್ಸರ.

### ಸೇನಾಪತಿಗಳ ಹಾವಳಿ.

ಸೇನೆಯುವರ ದಂಗೆ, ಓಬಂಣನ ತಲೆ ಹುಯಿದದ್ದು.

ಶ|| ೧೪೯೬ನೇ ಆನಂದ ಸಂ|| ಮಾಘ ಶು|| ೨ ಯಲ್ಲು ಇಮ್ಮಡಿ ಮದಕರಿನಾಯಕನ ಸಾಕುಮಗ ಓಬಂಣನಿಗೆ ಪಟ್ಟ ಕಟ್ಟಿದರು. ಆದರೆ ರಾಕ್ಷಸ ಸಂ|| ದ ವೈಶಾಖ ಶುದ್ಧ ೫ ದಿವಸ ಠಾಣೇ ಗುರಿಕಾರರು ತಮಗೆ ಪಟ್ಟದ ಕಾಣಿಕೆಯಾಗಿ ಪದ್ಧತಿಪ್ರಕಾರ ಒಂದು ತಿಂಗಳ ಸಂಬಳ ಇನಾಮಾಗಿ ಕೊಡಲಿಲ್ಲವೆಂದು ತಿರುಗಿಬಿದ್ದು, ಚಿಕ್ಕಬಾಗಿಲ ಬಳಿಯಲ್ಲಿ ಹೊಸ ದೊರೆ ಓಬಂಣನನ್ನು ತಲೆ ಹುಯಿದರು. ಕಾಟಪ್ಪನಾಯಕನ ಮಗ ಲಿಂಗಂಣನಾಯಕನನ್ನೂ ಕೊಂದುಹಾಕಿದರು. ಈ ಅವಾಂತರದಲ್ಲಿ ಹಿರೀಕುಮಾರ ಸರ್ಜೇರಾಯನ ಮಗ ಚಿಕ್ಕಂಣನು ಭಯದಿಂದ ತನ್ನ ತಲೆ ತಪ್ಪಿಸಿಕೊಂಡು ಹರಪನಹಳ್ಳಿಗೆ ಓಡಿಹೋಗಿ ತರುವಾಯ ಕಣಕುಪ್ಪೆಗೆ ಸೇರಿದನು. ಈ ಲಿಂಗಂಣನಾಯಕನು ಕಸ್ತೂರಿ ರಂಗಪ್ಪನಾಯಕನ ಹಿರೀ ಮಗನಾದ ಸರ್ಜೆರಾಯನ ಜ್ಯೇಷ್ಠಪುತ್ರ. ಕಸ್ತೂರಿ ರಂಗಪ್ಪನಾಯಕನ ತರುವಾಯ ಜ್ಯೇಷ್ಠ ಸಂತತಿಗೆ ಸೇರಿದ ಮೊಮ್ಮಗನಾದ ಈ ಲಿಂಗಂಣನಿಗೆ ಪಟ್ಟವಾಗಬೇಕಾಗಿತ್ತು. ಇದು ತಪ್ಪಿಹೋಗಿ ಕಸ್ತೂರಿ ರಂಗಪ್ಪನ ಮೂರನೇ ಮಗನಾದ ಇಮ್ಮಡಿ ಮದಕರಿನಾಯಕನಿಗೆ ದೊರೆತನವನ್ನು ಕೊಟ್ಟಿದ್ದರು. ಈ ಅನ್ಯಾಯವು ಜನರ ಮನಸ್ಸಿನಲ್ಲಿಯೂ ಸೇನಾಪತಿಗಳ ಮನಸ್ಸಿನಲ್ಲಿಯೂ ಹೊಗೆಯಾಡುತ್ತಲೇ ಇದ್ದಂತೆ ತೋರುತ್ತೆ. ಇಮ್ಮಡಿ ಮದಕರಿನಾಯಕನಿಗೆ ಮಕ್ಕಳಿಲ್ಲ. ಆಗಲೂ ಸರ್ಜೆರಾಯನ ಮಕ್ಕಳನ್ನು ಬಿಟ್ಟು ಇಮ್ಮಡಿ ಮದಕರಿನಾಯಕನಿಗೆ ಒಬ್ಬ ಸಾಕು ಮಗನನ್ನು ಕಲ್ಪನೆ ಮಾಡಿ ಅವನಿಗೆ ಪಟ್ಟಾಕಟ್ಟಿದ್ದು ಜನರ ಅಸಮಾಧಾನ ಹೆಚ್ಚಾಗುವುದಕ್ಕೆ ಕಾರಣವಾಯಿತು. ಓಬಂಣನ ಪಟ್ಟಾಭಿಷೇಕದ ಮಹೋತ್ಸವಕಾಲದಲ್ಲಿ ತಮಗೆ ಒಂದು ತಿಂಗಳ ಸಂಬಳ ಇನಾಮು

ಕೊಡಲಿಲ್ಲವೆಂಬ ತಾತ್ಕಾಲದ ಆಕ್ರೋಶವು ಸೇನೆಯವರಿಗಿದ್ದ ಹಿಂದಿನ ಅಸಮಾಧಾನವೆಂಬ ಮದ್ದಿಗೆ ರಂಜಕವಾಯಿತು. ಇದರಿಂದ ಸೇನೆಯ ಜನರೂ ಇತರರೂ ಗುಂಪೆದ್ದು ವಿಪರೀತವಾದ ಕೃತ್ಯಗಳನ್ನು ನಡಿಸಿದರು.

ಹೀಗೆ ಅವಾಂತರವಾಗಿದ್ದಕಾರಣ ನ್ಯಾಯವಾಗಿ ಹಕ್ಕುದಾರನಾದ ಸರ್ಜಿರಾಯನಮಗ ಚಿಕ್ಕಂಣನನ್ನುಕರೆದು ತರಲು ದಳವಾಯಿ ದೇಸಂಣ, ರಂಗಪ್ಪ ಇವರಿಬ್ಬರೂ ಬಿಳಿಚೋಡಿಗೆ ಹೋಗಿ ಇಳಿದುಕೊಂಡು, ಚಿಕ್ಕಂಣನನ್ನು ಕಣಕುಪ್ಪೆಯಿಂದ ಅಲ್ಲಿಗೆ ಕರೆಯಿಸಿಕೊಂಡು, ಆತನಿಗೆ ಬಹಳವಾಗಿ ನಂಬಿಕೆಕೊಟ್ಟು ಅವನನ್ನು ದುರ್ಗಕ್ಕೆ ಕರೆದುಕೊಂಡುಬಂದರು. ಆ ಚಿಕ್ಕಂಣನಾಯಕನಿಗೆ ಶ|| ೧೫೯೭ನೇ ರಾಕ್ಷಸ ಸಂ|| ಜೇಷ್ಠ ಬಹುಳ ೨ ಸೋಮವಾರದಲ್ಲೂ ಸಿದ್ಧೇಶ್ವರನ ಗುಡಿಯಲ್ಲಿ ಪಟ್ಟಾಕಟ್ಟಿದರು. ಈ ಹೊಸ ದೊರೆಯು ಸಕಲರಿಗೂ ಅರ್ಧಾಯ ಪಟ್ಟಗಾಣಿಕೆ ಎಂದು ಸಂದಾಯ ಮಾಡಿದನು.

ನಳ ಸಂ|| ದಲ್ಲಿ ನಿಡಗಲ್ಲವರು ಸಾಣೇಕೆರೆಗೆ ೨೦ ದಿವಸ ಮುತ್ತಿಗೆ ಹಾಕಿದರು. ತರುವಾಯ ದುರ್ಗದ ಸೇನೆಯು ಬಲವಾಗಿ ನಿಂತು ಎದುರಿಸಿದ್ದರಿಂದ ಶತ್ರುಗಳು ಕೌಲು ಮಾಡಿಕೊಂಡು ಕೋಟೆಯನ್ನು ದುರ್ಗದವರ ವಶಮಾಡಿದರು.

ಹರಪನ ಹಳ್ಳಿಯವರು ಅಣಜಿ ಮುತ್ತಿದ್ದು.

ಇದೇ ಸಂ|| ಮಾಘಮಾಸವಲ್ಲಿ ಹರಪನಹಳ್ಳಿಯ ಪಾಳಯಗಾರರು ಅಣಜಿಕೋಟೆಯನ್ನು ಹಿಡಿದು ಅಲ್ಲಿ ಅಧಿಕಾರಿಯಾಗಿದ್ದ ಭೂನಪ್ಪನನ್ನು ತಲೇ ಒಡೆದು ಕೊಂದರು. ಈ ಸಮಾಚಾರವನ್ನು ಕೇಳಿ ಪಾಳಯಗಾರ ಚಿಕ್ಕಂಣನಾಯಕನು ಸಾಣೇಕೆರೆಯಿಂದ ಅಣಜಿಗೆ ಹೋದನು. ಅಷ್ಟರೊಳಗೆ ಅಣಜಿಯಲ್ಲಿದ್ದ ಕೆಂಚನಗೌಡ ಮುತ್ತು ಮಂದಿ ಸಹಾ ಸ್ವಾಮಿಕಾರ್ಯಾರ್ಥವಾಗಿ ಧೈರ್ಯಮಾಡಿ ನಿಂತು ಹರಪನ ಹಳ್ಳಿಯವರನ್ನು ಸೋಲಿಸಿ ಓಡಿಸಿದರು. ಆಗ ಇವರ ಸಾಹಸಕ್ಕೆ ಮೆಚ್ಚಿ ಚಿಕ್ಕಂಣನಾಯಕನು ಅಣಜಿಯಲ್ಲಿದ್ದ ಮಂದಿಗೆ ಹೊಲವನ್ನು ಮಾನ್ಯಕೊಟ್ಟು ಎಲ್ಲರಿಗೂ ಉಡು

ಗರೆಯನ್ನಿತ್ತು ಮಾಘ ಬ॥ ೧೪ ಶಿವರಾತ್ರಿಯದಿವಸ ಚಿತ್ರದುರ್ಗಕ್ಕೆ ಬಂದನು. ಈ ಸಂವತ್ಸರದಲ್ಲಿ ಹೊರಕನಾಯಕನ ಮುಖಾಂತರ ಚಿಕ್ಕಂಣನಾಯಕನ ಸುತ್ತಿನ ಕೋಟೆ, ಕಲ್ಲುಬಾಗಿಲ ಬಳಿಯಣ ಅರಮನೆ, ಇದರ ಸುತ್ತಿನ ಕೋಟೆ ಇದೆಲ್ಲವನ್ನೂ ಕಟ್ಟಿಸಿದರು.

ಷಂಷೇರ್‌ಖಾನನೊಡನೆ ಯುದ್ಧ.

ಪೈಂಗಳ ಸಂ॥ ದಲ್ಲಿ ಷಂಷೇರ್‌ಖಾನನ ದಂಡು ಹರಿಹರ ಮುತ್ತಲು ಬರುವುದೆಂದು ಅಲ್ಲಿನ ಸುಜೇದಾರ ಷೇರ್‌ಖಾನನ ಮೂಲಕ ತಿಳಿಯಿತು. ಷೇರ್‌ಖಾನನು ದುರ್ಗಕ್ಕೆ ಬಂದು ಈ ಸಂಗತಿ ಎಲ್ಲವನ್ನೂ ರಾಜರಿಗೆ ಅರಿಕೆ ಮಾಡಿದನು. ಅಷ್ಟರಲ್ಲಿ ಷಂಷೇರ್‌ಖಾನನು ೬೦೦೦ ಕುದುರೆ ೧೨೦೦೦ ಕಾಲುಬಲ ಇದರೊಡನೆ ಬಂದು ಹರಿಹರವನ್ನು ಮುತ್ತಿದನು. ರಾಜನು ಈ ಸಂಗತಿಯನ್ನು ಕೇಳಿ ಷೇರ್‌ಖಾನನನ್ನು ಕರೆದುಕೊಂಡು ಆ ಮುತ್ತಿಗೆಯನ್ನು ಬಿಡಿಸಲು ಹೊರಟು ಬಾರೆಗುಡ್ಡಕ್ಕೆ ಹೋಗಿ ಸೇನೆಯೊಡನೆ ಇಳಿದುಕೊಂಡನು ಮತ್ತು ಆ ದಿವಸ ರಾತ್ರಿಯೇ ಆ ಗುಡ್ಡದಲ್ಲಿದ್ದ ಮರಗಳಿಗೆಲ್ಲಾ ಪಂಜುಕಟ್ಟಿಸಿ ಎತ್ತುಗಳ ಕೋಡಿಗೆ ದೀವಟಿಗೆ ಕಟ್ಟಿಸಿ, ನಗಾರಿಯವರನ್ನೂ ಕಹಳೆಯವರನ್ನೂ ವಾದ್ಯದವರನ್ನೂ ಗುಡ್ಡದಲ್ಲಿಯೇ ಇಟ್ಟು, ಏಕಕಾಲದಲ್ಲಿ ಶಬ್ದಮಾಡಿಸಿ ಹುಲ್ಲಹಾಸಿಸಿ ಅದಕ್ಕೂ ನೂರು ಇನ್ನೂರು ಬಾಣಗಳಿಗೂ ಏಕಕಾಲದಲ್ಲಿ ಬೆಂಕಿ ತೋರಿಸಿದರು. ಈ ಬಟ್ಟು ಬೇಗೆಯನ್ನು ಕಂಡು ಇದಿಷ್ಟು ದಂಡೆಂದು ಶತ್ರುಗಳು ತಿಳಿದುಕೊಂಡು ಭೀತರಾದರು. ದೊರೆಯು ಸಕಲಬಲಸಮೇತವಾಗಿ ರಾತ್ರಿ ಹೊಳೇ ಅಂಚಿನಲ್ಲಿಯೇ ಹೊರಟು ಹರಿಹರದ ಪಡವಲಕಡೆ ಕೋಡಿಯಾಲದ ಬಳಿ ಹಾದು ತಳಿಗಳಮೇಲೆ ಬಿದ್ದು ಕಡಿದು, ಬಲಸಮೇತನಾಗಿ ಊರೊಳಕ್ಕೆ ಹೊಕ್ಕು, ಪ್ರತಿ ದಿನವೂ ಹೊರಕ್ಕೆ ಬರುತಾ ಯುದ್ಧಮಾಡುತಾ ಬಂದನು. ಷಂಷೇರ್‌ಖಾನನ ದಂಡು ಇದಕ್ಕೆ ತಡೆಯಲಾರದೆ ಎದ್ದುಹೋಯಿತು, ಕೋಟೆಯು ಶತ್ರುಗಳ ವಶವಾಗಲಿಲ್ಲ. ಹರಿಹರದ ಷೇರ್‌ಖಾನನಿಗೆ ಈ ಕೋಟೆಯ ಅಧಿಕಾರವನ್ನು ಮೊದಲಿನಂತೆ ಇಟ್ಟಿದ್ದರಿಂದ ಈತನು ದೊರೆಗೆ ಈ ಸೀಮೆಯ ಆಡಳಿತದ ವರ್ತನೆ, ಎರಡು ಕುದುರೆ ಉಡುಗರೆ ಇದೆಲ್ಲವನ್ನೂ ಒಪ್ಪಿಸಿದನು.

ಮಲೆನಾಡಿನವರೊಡನೆ ಯುದ್ಧ.

ಇದೇ ಪೈಂಗಳ ಸಂ॥ ದಲ್ಲಿ ಇಕ್ಕೇರಿದೊರೆಗಳ ಬಗೆ ಫೌಸುದಾರ ಕಾಸರಗೋಡು ತಿಮ್ಮಯ್ಯನು ದಂಡು ತೆಗೆದು ಕೊಂಡುಬಂದು ದುರ್ಗದ ಸೀಮೆಯನ್ನು ಧಾಳಿ ಮಾಡಿ ಛಿನ್ನಾಭಿನ್ನವಾಗಿ ಒಡೆದನು. ಆದರೆ ಇವನು ಆದವಾನಿಗೆ ಹೋಗುವದರೊಳಗೆ ಮೃತನಾದನು. ಕಾಳಾಯುಕ್ತಿ ಸಂ॥ ದಲ್ಲಿ ದುರ್ಗದ ಸೇನೆಯು ರಾಯದುರ್ಗದ ಕೋಟೆಗೆ ಮುತ್ತಿಗೇ ಹಾಕಿತು. ಆಗ ಅಲ್ಲಿನ ಪಾಳಯಗಾರನಾದ ಬುಟಕಲ್ ಬೊಂಮಂಣನಾಯಕನು ಊರಬಾಗಿಲ ಬೀಗದಕೈಯನ್ನೂ ಮುದ್ರೆಯನ್ನೂ ಸಹಾ ತಂದು ಚಿಕ್ಕಂಣನಾಯಕನಿಗೆ ಒಪ್ಪಿಸಿದನು. ಇದೂ ಅಲ್ಲದೆ ಅದೇ ಬೊಂಮ್ಮಂಣನಾಯಕನು ದುರ್ಗದ ರಾಜನಿಗೆ ಹೆಂಣುಕೊಡುತ್ತೇವೆಂದು ಒಡಂಬಡಿಕೆ ಹೇಳಿಕಳುಹಿಸಿದನು. ಆಗ ಚಿಕ್ಕಂಣನಾಯಕನು ಬೊಮ್ಮಂಣನಾಯಕನನ್ನೂ ಅವನ ಕುಟುಂಬವನ್ನೂ ಸಹಾ ರಾಯದುರ್ಗಕ್ಕೆ ಕಳುಹಿಸಿಕೊಟ್ಟನು. ಕಾಳಾಯುಕ್ತಿ ಸಂ॥ ದಲ್ಲಿ ಚಿಕ್ಕಂಣನಾಯಕನಿಗೆ ಮದುವೆ ಬೆಳೆಯಿತು. ಶ॥ ೧೬೦೦ ಕ್ಕೆ ಸರಿಯಾದ ಇದೇ

ರಾಜಕುಟುಂಬದವರು ಶಿವಾಚಾರದವರಾದ್ದು.

ಕಾಳಾಯುಕ್ತಿ ಸಂ॥ ದಲ್ಲಿ ಅರಮನೆಯಲ್ಲಿ ಸರ್ವರೂ ಜಂಗಮರ ಕೈಯಿಂದ ಶಿವದೀಕ್ಷೆಯನ್ನು ತೆಗೆದು ಕೊಂಡು, ರಾಜನೂ ನಾಗತಿಯರೂ ಸಹಾ ವಿಶಿಷ್ಟರೂ ಲಿಂಗವನ್ನು ಕಟ್ಟಿಸಿಕೊಂಡರು. ಇವರುಗಳಿಗೆ ಪಾದಾ ಪಾಲಿಸುವುದಕ್ಕೆ ಉಗ್ರಚನ್ನ ವೀರದೇವರೆಂಬ ವಿರಕ್ತಜಂಗಮರಿಗೆ ಗೊತ್ತು ಮಾಡಿ ಲಾಳಕೋಟೆ ಬಾಗಿಲಲ್ಲಿ ಇವರಿಗೆ ಒಂದು ಕಲ್ಲುಮಠ ಕಟ್ಟಿಸಿ ಕೊಟ್ಟಿದ್ದರು. ಆದರೆ ಇದೇ ಸಂ॥ ದಲ್ಲಿ ಲಿಂಗವಂತರ ಮತವು ಸರಿ

ಶಿವಭಕ್ತರ ಮತ ಬಿಟ್ಟು ಬಿಟ್ಟದ್ದು.

ಬೀಳದೇಹೋದ್ದರಿಂದ ರಾಜನ ಮನೆತನದವರೆಲ್ಲರೂ ಲಿಂಗವನ್ನು ತೆಗೆದುಬಿಟ್ಟರು, ಆದರೆ ಹಟ್ಟಿ ಮಲ್ಲಮ್ಮನಾಗತಿಮಾತ್ರ ಲಿಂಗಾ ಕಟ್ಟಿಕೊಂಡು ಎಲ್ಲರನ್ನೂ ಬಿಟ್ಟು ಬೇರೆ ವಾಸಮಾಡುತಿದ್ದಳು.

ಚಂದ್ರಾಯುಧಕ್ಕೆ ಮದುವೆ.

ಶ|| ೧೬೦೧ ನೇ ಸಿದ್ಧಾರ್ಥಿ ಸಂ|| ದಲ್ಲಿ ತರೀಕೆರೆ ಪಾಳಯಗಾರರು ತಮ್ಮ ಮನೆಯ ಹೆಂಣುಮಗಳಾದ ಹನುಮವ್ವ ಬಹಳ ಚಲುವೆ ಎಂತಲೂ ಇವಳನ್ನು ದುರ್ಗದ ಪಾಳಯಗಾರ ಚಿಕ್ಕಂಣನಾಯಕನಿಗೆ ಮದುವೆಮಾಡಿಕೊಡುತೇವೆಂತಲೂ ಬಿದರೂರು ಚನ್ನಮ್ಮಾಜಿ, ಶಬನಿ ಕೃಷ್ಣಪ್ಪ ಇವರ ಮಾಧ್ಯಸ್ಥದ ಮೂಲಕ ಹೇಳಿಕಳುಹಿಸಿದರು. ಆಗ ದುರ್ಗದ ದೊರೆಯು ಪಟ್ಟದ ಆಯುಧಗಳನ್ನು ಕಳುಹಿಸಿ ಅದಕ್ಕೆ ಮದುವೆಮಾಡಿಕೊಡಬೇಕೆಂದು ಹೇಳಿಕಳುಹಿಸಿದನು. ಚಿಕ್ಕಂಣನಾಯಕನು ತಾನೇ ಬರದೇ ಮದುವೆಗಾಗಿ ತನ್ನ ಚಂದ್ರಾಯುಧವನ್ನು ಕಳುಹಿಸಿದಕಾರಣ ತರೀಕೆರೆಯವರು ತಮಗೆ ಅವಮಾನವಾಯಿತೆಂದು ತಿಳದು, ಶಕುನವ್ವ ಎಂಬ ಬೇರೊಬ್ಬ ಹೆಂಣುಮಗಳನ್ನು ಕೊಟ್ಟು ಆ ಚಂದ್ರಾಯುಧಕ್ಕೆ ಮದುವೆಮಾಡಿದರು. ಈ ಪ್ರಕಾರ ಈ ಮೊದಲು ಕೊಡುವುದಾಗಿ ವಾಗ್ದಾನವಮಾಡಿದ್ದ ಕನ್ಯವನ್ನು ಬಿಟ್ಟು ಬದಲು ಹೆಂಣನ್ನು ಮದುವೆ ಮಾಡಿದರೆಂದು ಚಿಕ್ಕಂಣನಾಯಕನು ಕೇಳಿ, ತರೀಕೆರೆಯ ಪಾಳಯಪಟ್ಟನಮೇಲೆ ದಂಡೆತ್ತಿ ಯಗಟಿ, ಯಲ್ಲಂಬಳಸೆ, ಚೌಳಹಿರಿಯೂರು, ಈ ಮೂರು ಗಡಿಗಳನ್ನೂ ತೆಗೆದುಕೊಂಡು ತರೀಕೆರೆಯಮೇಲೆ ಹೊರಡಲು ಉದ್ಯುಕ್ತನಾದನು. ಇದು ಆದಮೇಲೆ ತರೀಕೆರೆಯವರಕಡೆ ನಿಯೋಗಿಗಳು ಬಂದು ಹನುಮವ್ವನಾಗತಿಯನ್ನೇ ಕೊಡುತೇವೆಂದು ಸಲಹೆಮಾಡಿಕೊಂಡುಹೋದರು. ತರುವಾಯ ರಾಜನು ತರೀಕೆರೆಗೆ ಹೋಗಿ ಹನುಮವ್ವನಾಗತಿಯನ್ನೇ ಮದುವೆಯಾಗಿ ಬಂದನು. ಈ ಪ್ರಸ್ತುತಕ್ಕೆ ೧೦೦೦೦೦ರೂ ಮುಟ್ಟಿತು. ಈ ಮದುವೆ ಸಂಬಂಧದಿಂದ ಹುಟ್ಟಿದ ದ್ವೇಷಕ್ಕಾಗಿ ತೆಗೆದುಕೊಂಡಿದ್ದ ಗಡಿಗಳನ್ನು ದುರ್ಗದವರು ತರೀಕೆರೆಯವರಿಗೆ ಬಿಟ್ಟುಬಿಟ್ಟರು. ಇದೇ ಸಿದ್ಧಾರ್ಥಿ ಸಂ|| ದಲ್ಲಿ ಬಾಗೂರ ಚನ್ನಿಗರಾಯನ ತೇರು, ಚಿನ್ನದಮುಲಾಮಿನ ಗರುಡೋತ್ಸವದ ಮೂರ್ತಿ ಇದನ್ನು ಮಾಡಿಸಿದರು. ಇದೇ ಸಿದ್ಧಾರ್ಥಿ ಸಂ|| ದಲ್ಲಿ ಉಚ್ಚಂಗಿ ದುರ್ಗದ ಕೋಟೆಯನ್ನು ಕಟ್ಟಿಸುವಾಗ ಹಳೇ ಶತ್ರುಗಳಾದ ಹರಪನಹಳ್ಳಿಯವರೊಡನೆ ಲಡಾಯಿ ಸಂಭವಿಸಿತು, ದುರ್ಗದವರೇ ಗೆದ್ದರು.

ರೌದ್ರಿ ಸಂ॥ ದಲ್ಲಿ ಮೇಲ್‌ದುರ್ಗದಮೇಲೆ ವಿನಾಯಕನ ಗುಡಿ, ಹೊಂಡ ಮೊದಲಾದ ಉಪಯುಕ್ತವಾದ ಕೆಲಸಗಳನ್ನು ಮಾಡಿಸಿದರು.

ರಣದುಲ್ಲಾ ಖಾನನೊಡನೆ ಯುದ್ಧ.

ಇದೇ ರೌದ್ರಿ ಸಂವತ್ಸರದ ಮಾಘಮಾಸದಲ್ಲಿ ವಿಜಾಪುರದ ರಣದುಲ್ಲಾ ಖಾನನ ದಂಡು ಬಂತು. ಮೊಳಗೊಂಡನಹಳ್ಳಿಯನ್ನು ಹರಪನ ಹಳ್ಳಿಯವರು ಮುತ್ತಿದರು. ರಾಜನು ದಂಡಿನೊಡನೆ ಹೋಗಿ ಮುತ್ತಿಗೆಯನ್ನು ಎಬ್ಬಿಸಿದನು. ರಕ್ತಾಕ್ಷಿ ಸಂ॥ ದಲ್ಲಿ ಬೂದಿಹಾಳ ಮುತ್ತಿಗೆಗಾಗಿ ದಳವಾಯಿ ಚಿಕ್ಕಪ್ಪ, ಹೊರಕೆ ನಾಯಕ, ಕುಂಚಪ್ಪನ ದಾಸ್ಯಯ್ಯ ಇವರ ಸಂಗಡ ಸಕಲ ಬಲವನ್ನೂ ಕೊಟ್ಟು ಕಳುಹಿಸಿದರು. ಈ ದಂಡು ಹೋಗಿ ಬೂದಿಹಾಳಗೆ ಮುತ್ತಿಗೆ ಹಾಕಿತು. ಇಷ್ಟರಲ್ಲಿ ಗೋಲಕೊಂಡೆಯ ನವಾಬರ ಕಡೆ ಫೊದಲಿ ಲಿಂಗಪ್ಪನದಂಡು ಬರುವುದೆಂದು ತಿಳಿಯಬಂದಕಾರಣ, ಬೂದಿಹಾಳ ಮುತ್ತಿಗೆಯನ್ನು ಬಿಡಿಸಿ ಅಲ್ಲಿಂದ ದುರ್ಗಕ್ಕೆ ಸೇನೆಯನ್ನು ಕರಸಿಕೊಂಡರು.

ಗೋಲಕೊಂಡದವರ ಮುತ್ತಿಗೆ.

ಗೋಲಕೊಂಡದವರ ದಂಡು ಬಂದು ರಾಮಗಿರಿಗೆ ಮುತ್ತಿಗೆ ಹಾಕಿತು. ಆಗ ದುರ್ಗದ ದಂಡು ಬಂದು ಶತ್ರುಗಳನ್ನು ಓಡಿಸಿತು. ಶ॥ ೧೬೦೭ ನೇ ಕ್ರೋಧನ ಸಂ॥ ದ ಭಾದ್ರಪದ ಶು॥ ೭ ದಿವಸ ದುರ್ಗದ ದಂಡಿನವರು ವಿನಾಯಕನನ್ನು ಕಳುಹಿಸುವುದಕ್ಕೆ ಹೊರಟು ಹೊರಕ್ಕೆ ಹೋಗಿ ಉಜ್ಜನಿಗೆ ಮುತ್ತಿಗೆ ಹಾಕಿ ತೆಗೆದುಕೊಂಡರು. ತರುವಾಯ ೧॥ ತಿಂಗಳಮೇಲೆ ಶತ್ರುಗಳು ಕೌಲು ಮಾಡಿಕೊಂಡುರು. ಹರಪನಹಳ್ಳಿಯ ಪಾಳಯಪಟ್ಟನವರು ಉಜ್ಜನಿ ಕೋಟೆಯನ್ನು ಇದೇ ಸಂ॥ ಕಾರ್ತೀಕ ಶು॥ ೧೦ ದಿವಸ ಮುತ್ತಿ ಆ ಊರನ್ನು ತೆಗೆದುಕೊಂಡರು. ಆ ಯುದ್ಧದಲ್ಲಿ ದುರ್ಗದ ದಂಡು ಸೋತುಹೋಯಿತು. ಆ ಕೋಟೆಯಲ್ಲಿದ್ದ ಜರಿ ಮಲೆ ಬೊಮ್ಮಂಣನಾಯಕನನ್ನು ಹರಪನಹಳ್ಳಿಯವರು ಖೈದಿಯಾಗಿ ಹಿಡಿದುಕೊಂಡಿದ್ದು ಮೂರು ನಾಲ್ಕು ತಿಂಗಳಮೇಲೆ ಬಿಟ್ಟುಬಿಟ್ಟರು.

ಚಿಕ್ಕಂಣನಾಯಕನ ಮರಣ.

ಅಕ್ಷಯ ಸಂ॥ ದಲ್ಲಿ ದೊರೆಯಾದ ಚಿಕ್ಕಂಣನಾಯಕನು ೧೨ ವರುಷ ಆಳಿ ಸ್ವರ್ಗಸ್ಥನಾದನು. ಈತನಿಗೆ ಮಕ್ಕಳಿಲ್ಲ, ಇವರ ಅಂಣ ಮುಮ್ಮುಡಿ ಮದಕರಿನಾಯಕನಿಗೆ ಪಟ್ಟವಾಯಿತು.

---

## ೮ನೇ ಅಧ್ಯಾಯ.

### ಮುಮ್ಮುಡಿ ಮದಕರಿನಾಯಕ (ಲಿಂಗಂಣಮದಕರಿನಾಯಕ)

ಶ॥ ೧೬೦೮ನೇ ಅಕ್ಷಯ ಸಂ॥.

ಮುಮ್ಮುಡಿ ಮದಕರಿ ನಾಯಕನಿಗೆ ಪಟ್ಟ.

ಅಕ್ಷಯ ಸಂ॥ ಕಾರ್ತೀಕ ಶು॥ ೧೧ ಯಲ್ಲು ಚಿಕ್ಕಂಣನಾಯಕನ ಮುಮ್ಮುಡಿ ಮದಕರಿನಾಯಕನಿಗೆ ಪಟ್ಟ ಕಟ್ಟಿದರು. ಆ ಕಾಲದಲ್ಲಿ ವೀರಕ್ಷಾಮ ಸಂಭವಿಸಿತು.

ಸೇನೆಯವರ ೨ನೇ ಹಾವಳಿ, ಅದರ ಕಾರಣ.

ಸೇನಾನಾಯಕರ ಅಸಮಾಧಾನವೂ ಆಟೋಪವೂ ದಿನೇ ದಿನೇ ವಿಪರೀತವಾಗುತಾಬಂತು. ಇದಕ್ಕೆ ಕಾರಣವನ್ನು ವಿಚಾರಮಾಡಿದರೆ ಸ್ವಲ್ಪಮಟ್ಟಿಗೆ ನಿರ್ಧರಿಸಬಹುದಾಗಿ ತೋರುತ್ತೆ. ಚಿಕ್ಕಂಣನಿಗೆ ಪಟ್ಟವಾಗುವುದಕ್ಕೆ ಮುಂಚೆ ಇಮ್ಮುಡಿ ಮದಕರಿನಾಯಕನ ಸಾಕುಮಗ ಓಬಂಣನಿಗೆ ದೊರೆತನವನ್ನು ಕೊಟ್ಟಕಾಲದಲ್ಲಿಯೇ ಹಿರೀ ಸಂತತಿಯಾದ ಸರ್ಜರಾಯನ ವಂಶಕ್ಕೆ ರಾಜ್ಯ ತಪ್ಪಿಹೋಗಿ ಬೇರೇ ಸಂತತಿಗೆ ಬಂತಲ್ಲಾ ಎಂಬ ಅಸಮಾಧಾನ ಉಂಟಾಗಿತ್ತು. ಈ ವಿಚಾರವಾಗಿ ಚರ್ಚೆಹುಟ್ಟಿ ಕೆಲವರು ಸಾಕುಮಗನ ಪಕ್ಷವನ್ನು ವಹಿಸಿಕೊಂಡಿದ್ದರು. ಆದರೆ ಸರ್ಜರಾಯನ ವಂಶಸ್ಥರ ಪಕ್ಷವನ್ನು ಹಿಡಿದಿದ್ದ ಕಕ್ಷಿಯು ಬಲವಾಗಿದ್ದಕಾರಣ, ಅವರು ಓಬಂಣನಾಯಕನ ತಲೇ ಹುಯಿದು ಚಿಕ್ಕಂಣನಾಯಕನನ್ನು ಪಟ್ಟಕ್ಕೆ ಕೂರಿಸಿದರಷ್ಟೆ. ಆಗ್ಗೆ ಅದೇ ಜರುಗಿಹೋಯಿತು. ಓಬಂಣನಾಯಕನ ಪಕ್ಷವನ್ನು ಹಿಡಿದಿದ್ದವರ ಕೈ ನಡೆಯದೇ ಹೋದಾಗ್ಯೂ, ಆ ಸ್ವಲ್ಪ ಸಂಖ್ಯೆ ಜನರಿಗೂ ಕೆಲವು ಸೇನಾಪತಿಗಳಿಗೂ ಹುಟ್ಟಿದ್ದ ಬೆಂಕಿ

ಯೇನೋ ಆರಲಿಲ್ಲ. ಅದು ಹೊಗೆಯಾಡುತ್ತಲೇ ಇತ್ತು. ಚಿಕ್ಕಂಣ ನಾಯಕನಿಗೆ ದೊರೆತನವಾದಮೇಲೆ ಅವನ ಆಳಿಕೆ ಬಲವಾಗಿಯೇ ಜರುಗಿದಕಾರಣ ಬಹುಮಂದಿಯು ಅವನಂತೆಯೇ ನಡೆಯುತಾಇದ್ದರು. ಅವನ ಮರಣಾನಂತರ ಅವನ ಅಂಣ ಮುಮ್ಮಡಿ ಮದಕರಿನಾಯಕನನ್ನು ದೊರೆತನಕ್ಕೆ ತಂದರು. ಈ ಕಾಲದಲ್ಲಿ ಹಕ್ಕುದಾರಿ ವಿಚಾರದ ಚರ್ಚೆಯನ್ನು ಮಾಡುವುದಕ್ಕೆ ಪ್ರತಿಕಕ್ಷಿಯವರಿಗೆ ಸಮಯದೊರಕಿತು. ಹಿರೀ ಸಂತತಿಯವನಾದ ಸರ್ಜೆರಾಯನ ಹಕ್ಕಿನಮೇಲೆ ಅವನ ಹಿರೀಮಗನಾದ ಲಿಂಗಂಣನೆಂಬ ಮುಮ್ಮಡಿ ಮದಕರಿನಾಯಕನೇ ನ್ಯಾಯವಾದ ವಾರಸುದಾರನಾಗುತಿದ್ದನು. ಅಂಥವನನ್ನು ಬಿಟ್ಟು ಚಿಕ್ಕವನಾದ ಚಿಕ್ಕಂಣನಾಯಕನನ್ನು ಅಂಗೀಕರಿಸಿದಮೇಲೆ ಈ ಚಿಕ್ಕವನ ವಂಶದಲ್ಲಿಯೇ ರಾಜ್ಯ ಜರಗಬೇಕು. ಅವನು ಅಪುತ್ರವಂತನಾದ್ದರಿಂದ ಆ ಚಿಕ್ಕಂಣನಿಗೆ ದತ್ತುವಾದರೂ ಕೊಡಿಸಿ ರಾಜ್ಯವನ್ನು ನಿಲ್ಲಿಸಬೇಕಲ್ಲದೆ ಹಿರಿಯವನೆಂಬ ಕಾರಣದಮೇಲೆ ಈಗ ಲಿಂಗಂಣನನ್ನು ತಂದದ್ದು ಸರಿಯಲ್ಲ, ಹಿರಿಯವನಿಗೆ ಮೊದಲು ರಾಜ್ಯಪ್ರಾಪ್ತವಾಗಬೇಕಾದ್ದು ಸರಿಯಾದ ಮಾರ್ಗ; ಅಂಥವನನ್ನು ಮೊದಲು ಅಂಗೀಕರಿಸದೆ ಇರಲು ಯಾವಕಾರಣವಿತ್ತೋ ಈಗಲೂ ಅವನಿಗೆ ಪಟ್ಟವಾಗಕೂಡದೆಂಬ ಭಾಗದಲ್ಲಿಯೂ ಅದೇ ಕಾರಣವನ್ನೇ ಇಟ್ಟುಕೊಳ್ಳಬೇಕು, ಎಂದು ಮೊದಲಿನಿಂದ ಅಸಮಾಧಾನಪಟ್ಟುಕೊಂಡು ಇಮ್ಮಡಿ ಮದಕರಿನಾಯಕನ ಸಾಕುಮಗನ ಪಕ್ಷವನ್ನು ವಹಿಸಿದ್ದವರು ಪುನಃ ತಲೆ ಎತ್ತಿದರು. ಇದೂ ಅಲ್ಲದೆ ಪದೇ ಪದೇ ಪರರಾಜರ ಮೇಲೆ ಯುದ್ಧ ಪ್ರಸಕ್ತಿಯು ಬೀಳುತ್ತಲೇ ಇತ್ತು. ಇದಕ್ಕಾಗಿ ಆಯಾಕಾಲದಲ್ಲಿದ್ದ ರಾಜರು ಸೇನೆಯನ್ನು ಹೆಚ್ಚಿಸಿ ಸೇನಾಪತಿಗಳನ್ನು ಅನುಸರಿಸಿಕೊಂಡು ಅವರಿಗೆ ಬೇಕಾದನ್ನು ಕೊಡುತಾ ಬಂದ ಕಾರಣದಿಂದಲೂ, ಅವರು ಆಗಾಗ್ಯೆ ಶತ್ರುಗಳನ್ನು ಜೈಸಿ ಹೆಸರ ಪಡೆಯುತಾ ಬಂದದರಿಂದಲೂ, ಸೇನಾನಾಯಕರ ಕೊಬ್ಬು ಹೆಚ್ಚಿತು. ಎದುರು ಕಕ್ಷಿಯವರು ಒಬ್ಬ ದೊರೆಯನ್ನು ಉರುಟಿಸಿದ್ದು ತಾವೂ ಇನ್ನೊಬ್ಬ ಪ್ರತಿಕಕ್ಷಿಯವರಿಂದ ನೇಮಿಸಲ್ಪಟ್ಟವನನ್ನು ತಳ್ಳಿ ಹಾಕಲು ಧೈರ್ಯವುಂಟುಮಾಡಿತು. ಒಂದು ಬಗೆಯಲ್ಲಿ ನ್ಯಾಯವನ್ನು

ನೋಡಿದರೆ ಹಿರೀ ಸಂತತಿಗೆ ರಾಜ್ಯ ದೊರೆಯದೇ ಹೋದತಪ್ಪನ್ನು ಈ ಚೆಗೆ ಸರಿಮಾಡಿಕೊಳ್ಳಬೇಕೆಂದು ಯತ್ನಮಾಡಿದ್ದು ಅಂಗೀಕಾರವಾಗ ಬಹುದು. ಆದರೆ ತಪ್ಪಿಹೋದ್ದು ತಪ್ಪಿಯೇ ಹೋಯಿತು. ಬೇರೊಬ್ಬದೊರೆ ನೇಮಕವಾದಮೇಲೆ ಅವನು ಯಾರೇ ಆಗಲಿ ಅವನ ಆಳಿಕೆಗೆ ಜನರು ಬಳಪಡಬೇಕು. ಹಾಗೆ ಬಳಪಡದೆ ಹಿಂದೆ ತಮ್ಮ ಹಗೆಯವರು ಓಬಂಣನಾಯಕನನ್ನು ತಲೆ ಬಡೆದುದರಿಂದ ಆ ಶತೃತ್ವವನ್ನು ತೀರಿಸಿಕೊಳ್ಳುವುದಕ್ಕೆ ಈಗ ಲಿಂಗಂಣ ಮದಕರಿನಾಯಕನನ್ನು ತಳ್ಳಿಹಾಕುತ್ತೇವೆಂದು ಕೆಲವು ಹಿಂದಿನ ತುಂಟರು ಹಠಮಾಡಿಕೊಂಡು ದಂಗೆ ಮಾಡಿದರೆನ್ನುವುದಕ್ಕೆ ಸಂದೇಹ ಕಾಣುವುದಿಲ್ಲ.

ದಂಗೆಯ ಸೇನೆಯವರಲ್ಲಿ ಕಕ್ಷಿ, ದಳವಾಯಿ ಪಂಚಮರ ಮುದ್ದಂಣನ ಪ್ರಾಬಲ್ಯ.

ಇದೇ ಮೊದಲಾದ ಉದ್ದೇಶ್ಯದಿಂದ ವಿಭವ ಸಂ॥ ಆಶ್ವೀಜ ಮಾಸದಲ್ಲಿ ದಳವಾಯಿ ಮುದ್ದಂಣನೂ ಇನ್ನೂ ಕೆಲವು ಸೇನೆಯವರೂ ತಿರುಗಿಬಿದ್ದು, ದೊರೆಯಾದ ಲಿಂಗಂಣ ಮದಕರಿನಾಯಕನು (ಮುಮ್ಮಡಿ ಮದಕರಿನಾಯಕ) ಕಸ್ತೂರಿ ರಂಗಪ್ಪನಾಯಕನ ಅರಮನೆಯಲ್ಲಿ ದೇವರಪೂಜೆಯನ್ನು ಮಾಡುತ್ತಿರುವಾಗ, ಅರಮನೆಯನ್ನು ಘೇರಾಯಿಸಿಕೊಂಡರು. ಆಗ ರಾಜರ ಬಳಿ ಇದ್ದ ಗುರಿಕಾರ ಹೊರಕೆನಾಯಕ. ರಾಮಜೋಗಿ, ತಡುಪಿನ ಚಿನ್ನಯ್ಯ, ಪೋತುರಾಜನ ಲಿಂಗಯ್ಯ, ಕೌಲು ತಮ್ಮಯ್ಯ, ಬೆಂಡೋಣಿ ದಾಸಯ್ಯ ಮುಂತಾದವರು—ಪಟ್ಟ ಕಟ್ಟಿದ ದೊರೆಯನ್ನು ತಾವು ಒಪ್ಪಿಸಿಕೊಡುವುದಿಲ್ಲವೆಂದು ಬಹಳ ಕಸ್ತುಮಾಡಿ ಬೆನ್ನಹಾಕಿಕೊಂಡರು. ಆಗ ಮೆಳೆಕಟ್ಟೆ ಮಾದಯ್ಯ ಮೊದಲಾದವರು ಮಾಧ್ಯಸ್ಥಮಾಡಿದರು. ದಳವಾಯಿ ಮುದ್ದಂಣನು ರಾಜನ ಕಡೆಯವರಾಗಿದ್ದ ಗುರಿಕಾರರನ್ನೆಲ್ಲಾ ಅಂಕೆಯಲ್ಲಿಟ್ಟು ರಾಜನನ್ನು ಮೇಲು ದುರ್ಗಕ್ಕೆ ಕರೆತಂದು ಅವನಿಗೆ ಮೂಗು ಕುಯಿದು ಹುಣಸೇ ಮರದ ಗಿರಿಯಂಣನ ಮನೆಯಲ್ಲಿ ಸೆರೆಹಾಕಿ ಇದೇ ವಿಭವ ಸಂ॥ ಆಶ್ವೀಜ ಶು॥ ೧೨ ಯಲ್ಲಿ

ದೊಂಣೆ ರಂಗಪ್ಪನಿಗೆ ಪಟ್ಟ.

ದೊಂಣೆ ರಂಗಪ್ಪನಾಯಕನೆಂಬ ಬೇರೊಬ್ಬ ಮನುಷ್ಯನನ್ನು ಪಟ್ಟಕ್ಕೆ ಕೂರಿಸಿದನು. ದಳವಾಯಿ ಮುದ್ದಂಣನೇ ಸರ್ವಾಧಿಕಾರವನ್ನೂ ವಹಿಸಿಕೊಂಡು ಚಿಕ್ಕಂಣ

ನಾಯಕರ ಅರಮನೆಯಲ್ಲಿ ವಾಸಮಾಡುತಾ ಇದ್ದನು. ಆದರೆ ಈ ದಳವಾಯಿ ಮುದ್ದಂಣನ ಮೂರು ಜನ ತಮ್ಮಂದಿರಾದ ಚಿಕ್ಕಪ್ಪ, ಚಿಕ್ಕಪ್ಪ, ರಾಯಂಣ ತಂತಮ್ಮಮನೆಯಲ್ಲಿಯೇ ವಾಸಮಾಡಿಕೊಂಡಿದ್ದರು. ಈ ದಳವಾಯಿ ಮುದ್ದಣನು ಬಿದರಕೆರೇ ಹೊಲಬಿನಲ್ಲಿ ಸಂತೇ ಮುದ್ದಾಪುರದ ಗ್ರಾಮವನ್ನೂ ಅಲ್ಲಿ ಹನುಮಂತರಾಯನ ದೇವಸ್ಥಾನ, ಕೆರೆಗಳನ್ನೂ ದುರ್ಗದಲ್ಲಿ ಶಿರಗಿರಿ ಮಲ್ಲಿಕಾರ್ಜುನನ ದೇವಸ್ಥಾನವನ್ನೂ ಸ್ಥಾಪನೆ ಮಾಡಿದನು. ಇವನ ತಮ್ಮ ಚಿಕ್ಕಂಣನು ಬೇರೆ ನಾಲ್ಕು ಗ್ರಾಮಗಳನ್ನು ಮುರಿದು ತನ್ನ ಹೆಸರಿನಲ್ಲಿ ಚಿಕ್ಕಂಣನ ಹಳ್ಳಿಯನ್ನು ಕಟ್ಟಿಸಿದನು. ಚಿಕ್ಕಪ್ಪನ ಗಾಣದಹಾಳು ಗ್ರಾಮವನ್ನು ಒಡೆದು ಚಿಕ್ಕಪ್ಪನ ಹಳ್ಳಿಯನ್ನುಕಟ್ಟಿಸಿ, ಇದಕ್ಕೆ ಪೂರ್ವಕ್ಕೆ ಇದ್ದ ತಗ್ಗಿನಹಳ್ಳಿ ಎಂಬಗ್ರಾಮಕ್ಕೆ ತನ್ನ ಹೆಂಡತಿ ಮಾಡಲಕ್ಕನ ಹೆಸರಿಗೆ ಮಾಡಲಕ್ಕನ ಹಳ್ಳಿಯನ್ನು ಮಾಡಿಸಿದ. ರಾಯಂಣನು ಮಲ್ಲಭಟ್ಟರ ಹಳ್ಳಿಗೆ ರಾಯಂಣನ ಹಳ್ಳಿ ಎಂದು ಹೆಸರಿಟ್ಟನು. ಮತ್ತು ಸಾದರಹಳ್ಳಿ ಕೆರೆ, ದುರ್ಗದ ಬಳಿ ಕಲ್ಲಮಠ ಸಹಾ ಕಟ್ಟಲ್ಪಟ್ಟವು.

ಪಂಚಮರ ಮುದ್ದಂಣನ ಮೇಲೆ ದಳವಾಯಿ ಭರಮಪ್ಪ ತಿರುಗಿ ಬಿದ್ದುದು

ಈ ದಳವಾಯಿ ಮುದ್ದಂಣ ಇವನ ಮೂರು ಜನ ತಮ್ಮಂದಿರೂ ಸಹಾ ವಿಶೇಷವಾಗಿ ಪ್ರಬಲವಾಗುತಾ ಬಂದದ್ದು ಇತರ ಜನರಿಗೂ ಮತ್ತು ದಳವಾಯಿ ಭರಮಪ್ಪನಿಗೂ ಸರಿಯಾಗಿ ತೋರದೆ ತಿರುಗಿ ಸೇನಾಪತಿಗಳಲ್ಲಿ ಒಬ್ಬೊಬ್ಬರಿಗೆ ವೈಷಮ್ಯ ಹುಟ್ಟಿತು. ದೊರೆಯಾದ ಲಿಂಗಂಣನನ್ನು ಮುದ್ದಂಣ ಹಿಂಸೆಮಾಡಿ ಕೊಂದ ಫಲಕ್ಕೆ ತಲೆಗೆ ತಲೆಯನ್ನು ತೆಗೆದುಕೊಳ್ಳುವವರೆಗೆ ಮತ್ಸರ ತೀರುವುದಿಲ್ಲವೆಂದು ಯೋಚಿಸಿ, ದಳವಾಯಿ ಭರಮಪ್ಪನು ಪ್ರಬಲನಾಗಿದ್ದ ಪಂಚಮರ ಮುದ್ದಂಣನನ್ನೂ ಮತ್ತೂ ಇವನ ಮೂರು ಜನ ತಮ್ಮಂದಿರನ್ನೂ ಉಪಾಯದಿಂದ ಕೈಸೆರೆ ಹಿಡಿದು, ಕೋತಿ ಬಂಡೆಯಬಳಿಯಲ್ಲಿ ಶಿರಚ್ಛೇದನ ಮಾಡಿಸಿ, ನೆಪಮಾತ್ರಕ್ಕೆ ದೊರೆ ಎಂದು ಕೂರಿಸಿದ್ದ ದೊಂಣೆ ರಂಗಪ್ಪನನ್ನು ಓಬಳದೇವರ ಗುಡೀಬಳಿಯಣ ಅರಮನೆಯಲ್ಲಿ ಸೆರೆ ಇಟ್ಟು ಸರ್ವಾಧಿಕಾರ

ವನ್ನೂ ವಹಿಸಿದನು. ಆದರೆ ಈ ಭರಮಪ್ಪನು ದೂರದೃಷ್ಟಿಯಿಂದ ಯೋಚಿಸುತಾ—ಸಂಸ್ಥಾನಕ್ಕೆ ಅರಸುತನವಿಲ್ಲದಿದ್ದರೆ ಕೇಡಾದೀತೆಂದು ತಿಳಿದು ಬೇರೇ ಏರ್ಪಾಡು ಮಾಡಬೇಕೆಂದು ನಿಷ್ಕರ್ಷೆ ಮಾಡಿಕೊಂಡನು.

ದಳವಾಯಿ ಭರಮಪ್ಪನ ದೂರದೃಷ್ಟಿ.

ಮತ್ತೀ ತಿಮ್ಮಣ್ಣನಾಯಕನ ಸಂತತಿಯು ಪಂಚಮರ ಮುದ್ದಣ್ಣನ ಹಿಂಸೆಯಿಂದ ಮೃತಪಟ್ಟ ಲಿಂಗಣ್ಣ ಮದಕರಿನಾಯಕನ ತಲೆಗೆ ತೀರಿ ಹೋಯಿತು.

---

## ೮ ನೇ ಅಧ್ಯಾಯ.

೧೬೧೬

ಹೀಗೆ ತಿಮ್ಮಣ್ಣನಾಯಕನ ಸಂತತಿ ನಿಂತು ಹೋದ್ದರಿಂದ ನ್ಯಾಯವಾದ ವಂಶೀಯರು ಯಾರಿದಾರೆಂದು ಚರ್ಚೆಬಿತ್ತು. ಹಿಂದೆ ದಿಳ್ಳೀಪ್ರಾಂತದಿಂದ ಬಂದ ಮೂರುಜನ ಸಹೋದರರಲ್ಲಿ ಜಡಕಲ್ಲು ನಾಯಕನ ಮಗ ಹಿರೀ ಹನುಮಪ್ಪನಾಯಕನು ಸಾದಲೆಯಲ್ಲಿಯೂ, ಎರಡನೆಯವನಾದ ಸಬ್ಬಗಡಿ ಓಬನಾಯಕನ ಮಗ ತಿಮ್ಮಣ್ಣನಾಯಕನು ಮತ್ತಿಯಲ್ಲಿಯೂ ಸ್ಥಳ ಮಾಡಿಕೊಂಡರು.

ರಾಜ್ಯಕ್ಕೆ ಉತ್ತರಾಧಿಕಾರಿಗಳು.

ಮೂರನೆಯವನಾದ ಬುಳ್ಳನಾಯಕನ ಮಕ್ಕಳು ೧ ಚಿಕ್ಕ ಹನುಮನಾಯಕ, ೨ ಓಬಣ್ಣನಾಯಕ, ಇವರು ಬಿಳಿಚೋಡಿನಲ್ಲಿ ನಿಂತಿದ್ದರಷ್ಟೆ. ಇವರಲ್ಲೆಲ್ಲಾ ತಿಂಮ್ಮಣನಾಯಕನೇ ಪ್ರಬಲಿಸಿದ್ದನು. ಉಳಿದವರೆಲ್ಲಾ ಸಾಧಾರಣವಾಗಿ ಬಡತನದಲ್ಲಿಯೇ ಇದ್ದರು. ಆದರೆ ತಿಮ್ಮಣ್ಣನ ವಂಶ ನಿರ್ವಂಶವಾದಮೇಲೆ, ರಾಜ್ಯವು ಅವನ ಹಿರಿಯ ಸಂತತಿಗೆ ಸೇರಬೇಕಾಗುವುದು. ಮೇಲೆ ಹೇಳಿದ ಸಾದಲೆ ವಂಶದವರು ಹಿರೀ ಸಂತತಿಯಾದರೂ ಅವರ ವಂಶೀಯರು ಮುಂದಕ್ಕೆ ಏನಾದರೋ ದುರ್ಗದಲ್ಲಿ ಗೊತ್ತಾಗಿ ತಿಳಿಯಲಿಲ್ಲ. ಇದುವರೆಗೆ ಉಳಿದಿದ್ದವರ ವಂಶ ವೃಕ್ಷವನ್ನು ಈ ಕೆಳಗೆ ಕೊಟ್ಟದೆ.

## ವಂಶವೃಕ್ಷ.




ಮೇಲಿನ ವಂಶವೃಕ್ಷದಲ್ಲಿ ತೋರಿಸಿರುವ ಪ್ರಕಾರ ೭ ನೇ ದೊರೆಯಾದ ಭರಮಪ್ಪನಾಯಕನು ದುರ್ಗದ ಪಾಳಯಗಾರತನಕ್ಕೆ ಹಕ್ಕುದಾರನಾಗಿದ್ದನು. ಇವನ ತಂದೆ ಕಸ್ತೂರಿರಂಗಪ್ಪನು ಕೇವಲ ಬಡವನಾಗಿ ಬಿಳಿಚೋಡಲ್ಲಿ ಜೀವನ ಮಾಡಿಕೊಂಡಿದ್ದನು. ಇವನ ಮಗ ಭರಮನು ಮೇಕೆ ಕಾಯುವುದಕ್ಕೆ ಅಡವಿಗೆ ಹೋಗಿ ಬಂದು ದಿನ ಆಯಾಸದಿಂದ ಬಂದು ಮರದ ಕೆಳಗೆ ಮಲಗಿಕೊಂಡು ನಿದ್ರೆಮಾಡುತ್ತಿರುವಾಗ, ಇವನ ತಲೆ

ಕುರಿ ಕಾಯುವವನಿಗೆ ಐಶ್ವರ್ಯ ಬಂದದ್ದು.

ದಸಿಯಲ್ಲಿ ಒಂದು ನಾಗರಹಾವು ಬಂದು ಹೆಡೆ ಎತ್ತಿ ಆಡುತಿತ್ತಂತೆ. ಉತ್ತರದೇಶದಿಂದ ಮುರಗೇಂದ್ರಯ್ಯನವರು ಪರದೇಶಿಗಳಾಗಿ ದಕ್ಷಿಣ ದೇಶಕ್ಕೆ ಸಂಚಾರ ನಿಮಿತ್ತ ಬರುತಾ ಮಾರ್ಗದಲ್ಲಿ ಈ ಭರಮನ ತಲೆಯ ಬಳಿಯಲ್ಲಿ ನಾಗಸರ್ಪ ಹೆಡೆ ಯಾಡುವುದನ್ನು ಕಂಡು ಇವನ ಬಳಿಗೆ ಬಂದರು. ಸರ್ಪವು ಮರದ ಮೇಲೆಕ್ಕೆ ಹತ್ತಿಹೋಯಿತು. ಆಗ ಅಯ್ಯನವರು ಈ ಹುಡುಗ ನನ್ನು ಎಬ್ಬಿಸಿ—ನೀನು ಯಾರು? ನಿನ್ನ ಹೆಸರೇನು? ನಿನ್ನ ಜಾತಿ ಯಾವುದು ಎಂದು ಕೇಳಿದರು. ಭರಮನು ಅಯ್ಯನವರನ್ನು ನೋಡಿ ಭಯಪಟ್ಟು ಎದ್ದು ಅವರಿಗೆ ನಮಸಾರವನ್ನು ಮಾಡಿ—ನಾನು ವಾಲ್ಮೀಕಿ ಕುಲದವ, ನನ್ನ ಹೆಸರು ಭರಮ, ಎಂದನು. ಆಗ ಆ ವಿರಕ್ತರು, ಈ ದೇಶದ ದೊರೆತನವು ಮೂರು ತಿಂಗಳಲ್ಲಿ ನಿನಗೆ ಆಗುವುದು, ಎಂದು ಹೇಳಿ ಹೊರಟುಹೋದರು. ಈ ಭರಮನು ದಂಡಿಗೆಯಲ್ಲಿ ಕೇವಲ ಬಡತನದಿಂದ ಕಾಲ ಕಳೆಯುತಾ ಇದ್ದನು.

ಮುರಗಿಅಯ್ಯನವರು.

---

## ೧೦ ನೇ ಅಧ್ಯಾಯ

## ಭರಮಪ್ಪನಾಯಕ

ಶ॥ ೧೬೧೧ ನೇ ಶುಕ್ಲ ಸಂ॥ ದಿಂದ ಶ॥ ೧೬೩೦ ನೇ ಪ್ಲವ ಸಂ॥ ದ ವರೆಗೆ ದಳವಾಯಿ ಭರಮಪ್ಪ ಮುಂತಾದ ಸೇನಾ ಪತಿಗಳೂ ಇತರ ಪ್ರಮುಖರೂ ಸೇರಿ ಯೋಚಿಸಿ ಈ ದುರ್ಗದ ಸೀಮೆಗೆ ಶತ್ರುಗಳು ಹೆಚ್ಚಾಗಿದಾರೆ, ಅವರೆಲ್ಲರಿಗೂ ಈ ದೇಶಕ್ಕೆ ದೊರೆಯೇ ಇಲ್ಲವೆಂದು ತಿಳಿದರೆ ಅವರೆಲ್ಲಾ ಬಂದು ರಾಜ್ಯವನ್ನು ಹೊಡೆದುತೆಗೆದುಕೊಂಡು ಬಿಡಬಹುದು, ಎಂದು ದೂರವಾಗಿ ಆಲೋಚನೆಮಾಡಿ ಸರ್ವಸಮ್ಮತಿಯಿಂದ ಮೇಲೆ ಕಂಡ ಭರ ಮಣ್ಣನನ್ನು ಬಿಳಿಚೋಡಿನಿಂದ ಕರೆದುತಂದು ಶ॥ ೧೬೧೧ ನೇ ಶುಕ್ಲ ಸಂ॥ ದ ಆಶ್ವಿಯುಜ ಶು॥ ೧೦ ಯಲ್ಲು ಸಂಪಿಗೆ ಸಿದ್ಧೇಶ್ವರನ ಗುಡಿಯಲ್ಲಿ ಅವನಿಗೆ ಪಟ್ಟಾಕಟ್ಟಿದರು ಈ ದಳವಾಯಿ ಭರಮಪ್ಪ ಮಾಡಿದ ಮಹೋ ಪಕಾರಕ್ಕೆ ಪ್ರಮೋದೂತ ಸಂ॥ ದಲ್ಲಿ ಆತನಿಗೆ ಗೌಡಹಳ್ಳಿಯನ್ನು

ಭರಮಪ್ಪನಾಯಕನಿಗೆ ಪಟ್ಟಾಭಿಷೇಕ.

ಉಂಬಳಿಯಾಗಿ ಕೊಟ್ಟರು. ಶತ್ರುರಾಜರಿಗೆ ಈ ಸೀಮೆಯಮೇಲೆ ಇದ್ದ ದೃಷ್ಟಿಯನ್ನೂ ಅವರ ಪ್ರಯತ್ನವನ್ನೂ ಮುಂಚಿತವಾಗಿಯೇ ತಿಳಿದುಕೊಂಡೇ ದಳವಾಯಿ ಭರಮಪ್ಪನು ದೊರೆಯನ್ನು ನೇಮಿಸಿದ್ದು ಎಂದು ಚನ್ನಾಗಿ ಹೇಳಬಹುದು. ಯಾಕೆಂದರೆ ದುರ್ಗದ ದೊರೆಗಳಿಗೆ ಆಜನ್ಮ ಶತ್ರುಗಳಾಗಿದ್ದ ಹರಪನಹಳ್ಳಿಯವರೂ ಮತ್ತೂ ಬಿದರೂರವರೂ ಸಹಾ ಸೇರಿ, ಚಿತ್ರದುರ್ಗದ ದರ್ಬಾರಿನಲ್ಲಿ ಬಿಗಿ ಕಡಮೆಯಾಗಿದೆ, ಸ್ವಯೂಥ ಕಲಹಗಳು ಈಚೆಗೆ ಹೆಚ್ಚಾಗಿ ಸೇನಾನಾಯಕರು ತಿರುಗಿಬಿದ್ದಿದಾರೆ, ದಂಡಿನವರಿಗೆ ಸಂಬಳ ಕೊಡಲು ಕೋಶದಲ್ಲಿ ಹಣವಿಲ್ಲದಿರುವುದು ಒಂದು ದೊಡ್ಡ ಕಾರಣವಾಗಿದೆ, ಈ ಸಮಯದಲ್ಲಿ ಆ ಸೀಮೆಗೆ ಮುತ್ತಿಗೆ ಹಾಕಿದರೆ ರಾಜ್ಯವು ತಮ್ಮ ಕೈಗೆ ಸಿಕ್ಕುವುದು ಖಂಡಿತವೆಂದು ಯೋಚಿಸಿ, ಅಣಜೇ ಕೋಟೆಗೆ ಮುತ್ತಿಗೆ ಹಾಕಿದರು. ದಂಡಿನೊಡನೆ ದಳವಾಯಿ ಭರಮಪ್ಪನು ಹೋಗಿ ಪರಗಳನ್ನು ಎದುರಿಸಿದನು. ದುರ್ಗದ ದಂಡು ಸೋತು ಹೋಯಿತು. ದಳವಾಯಿ ಭರಮಪ್ಪನ ಆಂದಣವನ್ನು ಸಹಾ ಹರಪನ ಹಳ್ಳಿಯವರು ಕಿತ್ತುಕೊಂಡರು. ಅಣಜಿಯು ಶತ್ರುಗಳ ವಶವಾಯಿತು. ಹೋದ್ದು ಹೋಗಲಾಗಿ ನಿಂತ ಸೇನೆಯು ಮಾಘ ಶು॥ ೬ ದಿವಸ ದುರ್ಗಕ್ಕೆ ಓಡಿಬಂತು.

ಶತ್ರುಗಳು ಸಮಯ ಹುಡುಕಿದ್ದು

ಅಣಜಿ ಮುತ್ತಿಗೆ.

ಈ ಆಕ್ರೋಶವು ದುರ್ಗದ ಸೇನಾನಾಯಕರ ಮನಸ್ಸಿನಲ್ಲಿ ನಾಟಿಕೊಂಡೇ ಇತ್ತು. ಪುನಃ ದಳವಾಯಿ ಭರಮಪ್ಪನು ಬಳಗೇ ಸಂಧಾನ ಮಾಡಿ ಹರಪನಹಳ್ಳಿಯವರಿಂದ ಅಣಾಜಿಯನ್ನು ಕಿತ್ತುಕೊಳ್ಳಬೇಕೆಂದು ಅಗಾಧವಾದ ಪ್ರಯತ್ನಮಾಡಿದನು. ಪಾವನೂರು, ಗುಡ್ಡೇಕೋಟೆ, ಅನಂತಪುರ, ಜರಿಮಲೆ, ತರೀಕೆರೆ, ಈ ಸಂಸ್ಥಾನಗಳ ಸಹಾಯವನ್ನು ಪಡೆದು ಸಕಲ ಬಲಸಹಿತ ದಳವಾಯಿ ಭರಮಪ್ಪನು ಅಣಾಜಿಗೆ ಎರಡನೇ ಸಾರಿ ಮುತ್ತಿಗೆ ಹಾಕಿದನು. ಕೋಟೆ ಹೊರಗೆ ಸೂಲದ ಮರದಮೇಲಿನಿಂದ ಫಿರಂಗಿ ಹೊಡಿ ಲಡಾಯಿ ಮಾಡಿದರು. ಹೊರಗಿನಿಂದ ಹೊಡೆದ ಫಿರಂಗಿಗುಂಡು ಕೋಟೆಯೊಳಗೆ

ಹರಪನಹಳ್ಳಿಯವರ ಮೇಲೆ ಕಾರ್ಯಭಾಗ.

ಪಾಳಯಗಾರರು ಸಂಘ ಸೇರಿದ್ದು.

ಶತ್ರುಗಳು ಹಾರಿಸುತಾ ಇದ್ದ ಫಿರಂಗಿಬಾಯಿಯೊಳಕ್ಕೆ ಹೋಗಿ ಹೊಕ್ಕಿತು.

ಶತ್ರುಗಳ ಫಿರಂಗಿ ಆಡದೇಹೋದ್ದು.

ಕೋಟೆಯೊಳಗಿದ್ದ ಹರಪನಹಳ್ಳಿಯವರ ಫಿರಂಗಿಯು ಆಡಲು ಮಾರ್ಗ ತಪ್ಪಿಹೋದ್ದರಿಂದ ದುರ್ಗದವರ ಕೈ ಬಲವಾಯಿತು. ಶತ್ರುಗಳ ಕೈ ನಿಂತುಹೋಯಿತು. ಅವರು ಒಪ್ಪಂದ ಮಾಡಿಕೊಳ್ಳಲು ಸಲಹೆ ಕಳುಹಿಸಿದರು. ಮತ್ತು ಮೊದಲು ತಾವು ತೆಗೆದುಕೊಂಡಿದ್ದ ಅಂದಳ ಬಿರುದು ಮುಂತಾದೆಲ್ಲವನ್ನೂ ತಂದು ದಳವಾಯಿ ಭರಮಪ್ಪನಿಗೆ ಒಪ್ಪಿದರು.

ಆಂಗೀರಸ ಸಂ॥ ದಲ್ಲಿ ದುರ್ಗದ ಪಾಳಯಗಾರರು ಅಣಜಿ ಕೋಟೆಯನ್ನು ಸರಿಮಾಡಿಸಿ ಹೊಸದು ಮಾಡಿಸಿ ಬಿಗಿಮಾಡಿದರು. ಆ ವೂರ ಕೋಟೆಯನ್ನು ಕಟ್ಟಲು ಯತ್ನಮಾಡುವಲ್ಲಿ ಹರಪನಹಳ್ಳಿ ಸಂಸ್ಥಾನದವರು ಈ ಕೋಟೆಯ ಕಟ್ಟಕೂಡದೆಂದು ಬಹಳವಾಗಿ ಕಾದಿದರು. ದಿನವಹಿ ಯುದ್ಧ ನಡೆಯುತ್ತಲೇ ಇತ್ತು. ಶತ್ರುಗಳ ರಕ್ತದ ಕೆಸರಿನಲ್ಲಿ ಈ ಕೋಟೆಯನ್ನು ದುರ್ಗದವರು ಕಟ್ಟಿ ಮುಗಿಸಿದರಂತೆ. ಇದೇ ಆಂಗೀರಸ ಸಂ॥ ದಲ್ಲಿ ನರುಗನ ಹಳ್ಳಿ ಕುಮಾರ ರಘುವಪ್ಪನಿಗೆ ಅಂಪುಕಾ ಕೊಟ್ಟುಕಳುಹಿಸಿದರು. ಇವನು ಶ್ರೀಮುಖ ಸಂ॥ ದಲ್ಲಿ ತೀರಿಹೋದನು. ಇವನಿಗೆ ಮಗಳಾಗಿಯೂ ವಿಷಸಮುದ್ರ (ಈಸಾಮುದ್ರ) ದ ಮಾದೈನ ಹೆಂಡತಿಯಾಗಿಯೂ ಇದ್ದ ಸೂರ್ಯ ಕಾಂತವ್ವನ ಮಗ ರಂಗಪ್ಪನೆಂಬು

ಸೂರ್ಯಕಾಂತವ್ವನ ಮಗ ರಂಗಪ್ಪನ ಪಿತೂರಿ.

ವನು ದುರ್ಗದ ಹಿಂದಿನ ಪಾಳಯಗಾರರಿಗೆ ಹೆಂಣು ಸಂತತಿಯ ಬಾಧ್ಯಸ್ಥನಾಗಿಯೂ ಹರಪನಹಳ್ಳಿಯವರ ವಂಶಕ್ಕೆ ಸೇರಿದವನಾಗಿಯೂ ಇದ್ದನು. ಇವನನ್ನು ಮೇಲು ದುರ್ಗದ ಸೆರೆಯಲ್ಲಿಟ್ಟಿದ್ದರು. ಧಾತು ಸಂ॥ ಜ್ಯೇಷ್ಠ ಶುದ್ಧ ೧೦ ದಿವಸ ಏಕನಾಥಮ್ಮನ ಉತ್ಸವವಾಯಿತು. ಸೇವಾರ್ಥಕ್ಕಾಗಿ ಜನರೆಲ್ಲಾ ಹೊರಟುಹೋಗಿದ್ದರು. ಆ ಸಮಯದಲ್ಲಿ ಆ ರಂಗಪ್ಪನು ಸ್ವಾಮಿ ದ್ರೋಹಿಗುಡ್ಡದಿಂದ ಇಳೀ ಬಿದ್ದು ಓಡಿಹೋಗಿ ಚದುರಗೊಳ ತಲಪಿ ಶಾನುಭೋಗ ಬಿದರೆ ಕೆಂಚಯ್ಯನ ಕರೆದುಕೊಂಡು ಹರಪನಹಳ್ಳಿಗೆ ಹೋಗಿ ಆ ಸಂಸ್ಥಾನದವರಿಂದ ಮಂದಿ ಕುದುರೆ ಮುಂತಾದನ್ನು ತೆಗೆದುಕೊಂಡು ದುರ್ಗಕ್ಕೆ ಬಂದು ಠಾಣ್ಯಾಹಾಕಬೇಕೆಂದು ಯತ್ನಿಸಿದನು.

ನೂಲೇಣಿಯನ್ನು ಸಹಾ ತೆಗೆದುಕೊಂಡು ಬಂದು ಗರುಗದ ಗುಡ್ಡದಲ್ಲಿ ಅಡಗಿ ಇಳಿದುಕೊಂಡಿದ್ದನು. ಹೊಳಲ ಕೆರೆಯುವರೂ ಮಾಯ ಕೊಂಡದವರೂ ಇದನ್ನು ತಿಳಿದು ಬಂದು ರಂಗಪ್ಪನ ದಂಡಿನಮೇಲೆ ಬಿದ್ದು ಸಿಕ್ಕಿದವರನ್ನೆಲ್ಲಾ ತಲೇ ಹುಯಿದು, ಈ ಸೂರ್ಯಕಾಂತಪ್ಪನ ಮಗ ರಂಗಪ್ಪನ ತಲೆಯನ್ನೂ ಚದುರಗೊಳದ ಶಾನುಭೋಗ ಕೆಂಚಯ್ಯ ನನ್ನೂ ಸಹಾ ದುರ್ಗಕ್ಕೆ ತಂದು ಒಪ್ಪಿಸಿದರು. ದುರ್ಗದ ಭರಮಪ್ಪ ನಾಯಕನು ಈ ಕಾರ್ಯಮಾಡಿದವರಿಗೆ ಬಾಯಿತುಂಬಾ ಹೊನ್ನನ್ನು ಹುಯಿದನು. ಬಿದರೆ ಕೆಂಚಯ್ಯನನ್ನು ಗಡೀಪಾರುಮಾಡಿ ಚದುರ ಗೊಳದ ಪಡಿ ಶಾನುಭೋಗತನಕ್ಕೆ ಕರಣೀಕ ಭೂನಪ್ಪಯ್ಯನಮಗ ದೇವಂಣನಿಗೆ ನೇಮಿಸಿದರು. ಗ್ರಾಮದ ಆಯಗಾರರು ಕೈವಾಡದ ವರು ಇವರುಗಳನ್ನು ಕರೆಯಿಸಿ,—ನಿಮ್ಮ ಶಾನುಭೋಗನು ದಿವಾಣಕ್ಕೆ ಸ್ವಾಮಿ ದ್ರೋಹ ಮಾಡುವವರ ಜೊತೆಯಲ್ಲಿ ಕೂಡಿದ್ದರಿಂದ ಬ್ರಾಹ್ಮ ಣನ ತಲೇ ಒಡೆದರೆ ಪಾಪವೆಂದು ಗಡೀಪಾರು ಮಾಡಿ, ಈ ದೇವಂಣ ನಿಗೆ ನೇಮಕಮಾಡಿಸಿದೇವೆ. ಈ ದೇವಂಣನನ್ನು ಇಟ್ಟುಕೊಂಡು ಇವನ ಅನುಮತಿಯಿಂದ ನಡೆದುಕೊಂಡು ಹೋಗುವುದು ಎಂದು ತಾಕೀತಿಮಾಡಿ ೧೫ ಗ್ರಾಮಕ್ಕೆ ನಿರೂಪಾ ಬರೆಯಿಸಿಕೊಟ್ಟರು.

ಮರಾಟೆಯವರ ಹಾವಳಿ.

ಈ ಧಾತು ಸಂ|| ದಲ್ಲಿ ಸಂತೋಜೀ ಘೋರ್ಪಡೆಯು ೨೦೦೦೦ ಕುದು ರೆಯೊಡನೆ ಬಂದನು. ಸೀರ್‍ಯದ ಸುಬೇದಾರ ಕಾಸಿಂ ಖಾನನು ತಳಕಿನಿಂದ ದೊಡ್ಡೇರೀ ತನಕ ಲಡಾಯಿ ಮಾಡುತಾ ಹೋಗಿ ದೊಡ್ಡೇರಿ ಕೋಟೆಯೊಳಗೆ ಹೊಕ್ಕು ಅವಿತುಕೊಂಡನು. ದುರ್ಗದ ದೊರೆಯು ಕುಡುತನಿ ವೆಂಕಂಣ, ಹೊಳಲಕೆರೆ ಬೊಮ್ಮಂಣ, ಇವರಿಗೆ ಫೌಜುದಾರಿಕೊಟ್ಟು ಕುದುರೆಮಂದಿ ಸಹಾಕೊಟ್ಟು ಕಳುಹಿಸಿದನು. ಆಗ ಕಾಸಿಂಖಾನನು ಮೃತನಾದನು. ಕೋಟೆ ದುರ್ಗದವರ ವಶವಾಯಿತು. ಇದೇ ಧಾತು ಸಂ|| ದಲ್ಲಿ ದಿಲಾ ವರ ಬಕಷನ ದಂಡು ಬಂದು ರಾಜ್ಯದಮೇಲೆ ಬಿತ್ತು. ಅವನು ಗುಂಟ ನೂರು ಮಲ್ಲಪ್ಪನ ಮುಖಾಂತರ ೩೦೦೦೦೦ ವರಹಾ ಕೊಡಬೇ ಕೆಂದು ಹೇಳಿಕಳುಹಿಸಿದನು. ಬಹುಧಾನ್ಯ ಸಂ|| ದಲ್ಲಿ ಗುಡ್ಡೇಕೋಟೆ

ಯವರ ಮೇಲೆ ಕಾರ್ಯಭಾಗಮಾಡಿ ನಾಗಸಮುದ್ರಕ್ಕೆ ಮುತ್ತಿಗೆ ಹಾಕಿದರು. ಇವರ ಕಡೆ ಸಕ್ಕರೆ ನಾರಣಪ್ಪನು ಮಾಧ್ಯಸ್ಥಮಾಡಲಾಗಿ ಗುತ್ತಿಕೋಟೆ ಹೆಂಣುಮಗಳು ಬಂಗಾರವ್ವ ನಾಗತಿ ಕೊಟ್ಟು ದೊರೆಗೆ ಮದುವೆಯಾಯಿತು.

ಹಟ್ಟಿಕೋಟೆಯನ್ನು ಹಿಂದೂರಾಯನೂ, ರಾಯದುರ್ಗದವರೂ ಸಹಾ ಬಂದು ಮುತ್ತಿಗೆ ಹಾಕಿದರು. ಈ ಸಮಾಚಾರವನ್ನು ಪಾಳಯಗಾರ ಭರಮಪ್ಪನಾಯಕ ಕೇಳಿ ಹಾವನೂರು, ಗುತ್ತಿಕೋಟೆ, ನಿಡಗಲ್ಲು, ರತ್ನಗಿರಿ, ಜರಿಮಲೆ, ಸೀರ್‍ಯ, ಇಲ್ಲಿನ ಪಾಳಯಗಾರರನ್ನೆಲ್ಲಾ ಸೇರಿಸಿ ಹಟ್ಟಿಮಲ್ಲಪ್ಪನಾಯಕನ ಕರೆದುಕೊಂಡು ಹೋಗಿ ನನ್ನಿವಾಳದಬಳಿ ಇಳಿದು ಇದ್ದನು. ಆಗ ಹಗೆಗಳ ದಂಡು ಬಂದು ದುರ್ಗದಕಡೆಯವರ ಒಟ್ಟು ದಂಡನ್ನು ಮುತ್ತಿತು. ಮೂರುದಿನ ಪರಿಯಂತ ಜಗಳವಾಗಿ ದುರ್ಗದ ದಂಡಿನವರು ಅಡಿಗೇಮಾಡಿ ಊಟಾಮಾಡುವುದಕ್ಕೂ ಅವಕಾಶವಿಲ್ಲವಾಯಿತು. ದುರ್ಗದಿಂದ ರೊಟ್ಟಿಯನ್ನು ಮಾಡಿಸಿ ಎತ್ತುಗಳ ಮೇಲೆ ಹೇರಿ ಕಳುಹಿಸಿ ತಾನೇ ರಾಹುತರಿಗೆಲ್ಲಾ ಕೊಡಿಸಿ ಜಗಳವಾಡಿಸಿದರು. ಶತ್ರುಗಳ ದಂಡು ವಿಮುಖವಾಯಿತು. ಸೀರ್‍ಯದ ಫಡದುಲ್ಲಾಖಾನನ ಫೌಜೂ ದುರ್ಗದಫೌಜೂ ಸಹಾ ಶತ್ರುಗಳ ಬೆನ್ನಟ್ಟಿಕೊಂಡುಹೋಗಲಾಗಿ ಹಗೆಗಳು ಮುತ್ತಿಗೆ ಬಿಟ್ಟು ಓಡಿಹೋದರು. ಆದರೆ ಪುನಃ ದುರ್ಗದ ದಂಡು ಹಗೆಗಳ ಬೆನ್ನಹತ್ತಿ ಹೋಯಿತು. ಕೊಟ್ಟೂರ ಬಳಿ ಮತ್ತೆಯುದ್ಧವಾಯಿತು. ದುರ್ಗದವರೇ ಅಲ್ಲಿಯೂ ಜಯಹೊಂದಿದರು.

ಪಾಳಯಗಾರರ ಐಕಮತ್ಯ.

ಕೊಟ್ಟೂರು ವಿಜಯ

---

## ೧೧ ನೇ ಅಧ್ಯಾಯ.

### ಭರಮಪ್ಪನಾಯಕ (ಸಾಗುವುದು)

ಶ|| ೧೬೭೦ ನೇ ಪ್ರಮಾಥಿ ಸಂ|| ದಲ್ಲಿ ರಾಯದುರ್ಗದವರೊಡನೆ ಯುದ್ಧ ವದಗಿತು. ಇದರಲ್ಲಿ ಭರಮಣ್ಣನಾಯಕನ ಕಡೆ ದಂಡು, ನರಸಿಂಹನದುರ್ಗ, ಮೆಚ್ಚರೆ, ಇವುಗಳನ್ನು ಮುತ್ತಿ ತೆಗೆದುಕೊಂಡದ್ದು ಅಲ್ಲದೆ ಧೃವಜಲ ಮಲ್ಲಯ್ಯನ ದುರ್ಗಕ್ಕೂ ಠಾಣ್ಯಾಹಾಕಿದರು. ವ್ಯಯ ಸಂ|| ದಲ್ಲಿ ಗೌರಸಮುದ್ರದ ಕೋಟೆಯನ್ನು ದುರ್ಗದವರು ಮುತ್ತಿ ಈ ಗ್ರಾಮದ ಪಶ್ಚಿಮದ ಕಡೆ ಕೊತ್ತಲಕ್ಕೆ ತಳ ಸುರಂಗ ಹಾಕಿದರು. ಕೋಟೆ ಗೋಡೆಯು ಮೇಲಕ್ಕೆ ಹಾರಿ ಹಾಗೆಯೇ ಇದ್ದ ಸ್ಥಳದಲ್ಲಿಯೇ ಕೂತುಕೊಂಡಿತು. ಶತ್ರುಗಳು ಕೌಲು ಮಾಡಿಕೊಂಡರು. ಕೋಟೆಯು ದುರ್ಗದಸೇನೆಯ ವಶವಾಯಿತು. ಈ ಕಾಲದಲ್ಲಿ ಹೊಲತಿಹಾಳು ಕೆರೆಯನ್ನು ಬಿಚ್ಚಿಸಿ ಕಟ್ಟಿಸಿ ಇದಕ್ಕೆ ಭೀಮಸಮುದ್ರವೆಂದು ಹೆಸರಿಟ್ಟದ್ದು ಅಲ್ಲದೆ ಆ ಕೆರೆ ಹಿಂದೆ ಭೀಮೇಶ್ವರನ ಗುಡಿ ಕಟ್ಟಿಸಿ ದೇವರನ್ನು ಪ್ರತಿಷ್ಠೆ ಮಾಡಿದರು.

ರಾಯದುರ್ಗದವರೊಡನೆ ಯುದ್ಧ.

ಭೀಮಸಮುದ್ರದ ಕೆರೆ ಕಟ್ಟಿದ್ದು.

ಸರ್ವಜಿತು ಸಂ|| ದಲ್ಲಿ ರಾಯದುರ್ಗದವರು ಪುನಃ ಚಿತ್ರದುರ್ಗದವರ ರಾಜ್ಯದ ಮೇಲೆ ದಂಡೆತ್ತಿ ಬಂದರು. ಶತ್ರುಗಳ ಕಡೆ ಕೇಶವಾಚಾರಿಯು ಧನೋಜಿ ಎಂಬ ಮರಾಟೆ ಸರದಾರನನ್ನು ಕರೆದುಕೊಂಡು ಬಂದು ಒಡ್ಡಿನ ಹಳ್ಳಿ ಬಳಿಯ ಹಳ್ಳದಲ್ಲಿಳಿದು ಚಿತ್ರದುರ್ಗದವರಿಗೆ ಹಾವಳಿ ಮಾಡಿದನು. ಆಗ ಭರಮಪ್ಪನಾಯಕನು ಧನೋಜಿಗೆ ಹಣಾ ಕೊಟ್ಟು ಸಮಾಧಾನ ಮಾಡಿಕೊಂಡನು. ಇದೇ ಸಂ|| ದಲ್ಲಿ ಮಾರ್ಗಶಿರ ಮಾಸದಿಂದ ಸರ್ವಧಾರಿ ಸಂ|| ದ ಜ್ಯೇಷ್ಠ ಮಾಸದವರೆಗೆ ಸೀರ್ಯದ ಸುಬೇದಾರ ಫಡದುಲ್ಲಾಖಾನನ ಸಂಗಡ ಹೋಗಿ ಹೊಳೇಹೊನ್ನೂರಿಗೆ ಮುತ್ತಿಗೇಹಾಕಿ ಅದನ್ನು ಹಿಡಿದು ಫಡದುಲ್ಲನ ವಶಮಾಡಿ

ಪುನಃ ರಾಯದುರ್ಗದವರ ಗಾಗಳ.

ದರು. ಈ ಉಪಕಾರಕ್ಕೆ ಪ್ರತಿಯಾಗಿ ಅವನು ದುರ್ಗದ ದೊರೆಗೆ ದೊಡ್ಡೇರಿ ಸೀಮೆ, ಜಾಜೂರು ಸೀಮೆ ಇವುಗಳನ್ನು ಕೊಟ್ಟನು.

ಹರಪನಹಳ್ಳಿಯಲ್ಲಿ ಪ್ರತಿಷ್ಠೆ ಹೊಂದಿದ್ದು.

ಶ|| ೧೬೩೧ ನೇ ವಿರೋಧಿ ಸಂ|| ದಲ್ಲಿ ಹರಪನಹಳ್ಳಿಯನ್ನು ದುರ್ಗದ ಭರಮಪ್ಪನಾಯಕನು ಹಿಡಿದುಕೊಂಡು ಪೇಟೆಯಲ್ಲಿ ಮೋಳಾ ಕಟ್ಟಿಸಿಕೊಂಡು ಕೂತು, ಕಡೆಗೆ ದಯದಿಂದ ಧರ್ಮಕಹಳೆಯನ್ನು ಹಿಡಿಸಿ ಶತೃಗಳಿಗೆ ಊರನ್ನು ಕೊಟ್ಟು ದುರ್ಗಕ್ಕೆ ಬಂದನು. ಮನ್ಮಥ ಸಂ|| ದಲ್ಲಿ ಕುಮಾರ ಮದಕರಿನಾಯಕನು ನಿಡಗಲ್ಲವರ ಮೇಲೆ ದಂಡೆತ್ತಿ ಹೋಗಿ ತಳಕು, ಘಟಪರ್ತಿ ಮೊದಲಾಗಿ ೬ ಕೋಟೆಗಳನ್ನು ಹಿಡಿದುಕೊಂಡನು. ಪುನಃ ಹರಪನಹಳ್ಳಿಯವರು ತುಂಟತನಕ್ಕೆ ಆರಂಭಮಾಡಿದರು. ವಿರೋಧಿ ಸಂ|| ದಲ್ಲಿ ಭರಮಪ್ಪನಾಯಕನು ಅವರ ರಾಜಧಾನಿಯನ್ನು ಹಿಡಿದು ದಯದಿಂದ ಅದನ್ನು ಹಿಂತಿರುಗಿ ಕೊಟ್ಟದ್ದನ್ನು ಸ್ಮರಿಸದೆ, ಆ ವ್ರೂರ ಪಾಳಯಗಾರನು ಹೊಳಲಕೆರೆ ಕೋಟೆಗೆ ಮುತ್ತಿಗೆ ಹಾಕಿ ಅದನ್ನು ತೆಗೆದುಕೊಂಡು ಹಾವನೂರ ಹನುಮಂತಗೌಡನಿಗೆ ಕೊಟ್ಟನು. ಪ್ರತಿ ವರುಷವೂ ಈ ಹರಪನಹಳ್ಳಿಯವರು ದುರ್ಗದವರ ಸೀಮೆಯ ಗಡಿಗಳನ್ನು ತೆಗೆದುಕೊಳ್ಳುತಾ ವಿಶೇಷವಾದ ಗಲಭೆಯನ್ನು ಮಾಡುತ್ತಲೇ ಇದ್ದರು.

ಎಲ್ಲಾ ಕಡೆಯಲ್ಲಿಯೂ ದಿಗ್ವಿಜಯ

ಹೇವಿಳಂಬಿ ಸಂ|| ದಲ್ಲಿ ಮೇಲುದುರ್ಗದ ಮುರಗಿ ಮಠ ಕಟ್ಟಿ ಜಾಗ್ರತೆಯಾಗಿ ಮುಗಿಸಿದರು. ಹೀಗೆಯೇ ಹಲವು ಸಣ್ಣ ಕದನಗಳು ಆಗಾಗ್ಗೆ ನಡೆಯುತಾ ಇದ್ದಾಗ್ಯೂ ದುರ್ಗದವರೇ ಎಲ್ಲಾ ಕಡೆಯಲ್ಲಿಯೂ ಜಯಶೀಲರಾಗುತಾ ಬಂದರು. ಶ|| ೧೬೪೨ ನೇ ಶಾರ್ವರಿ ಸಂ|| ದಲ್ಲಿ ಬಾಗೂರ ಖಿಲ್ಲೇದಾರನು ಮೊಗಲಾಯರ ಕಡೆ ಸುಬೇದಾರ ದರ್ಗಾಕೂಲಿಖಾನನಮೇಲೆ ತಿರುಗಿ ಬಿದ್ದನು. ಆಗ ಆ ಸುಬೇದಾರನು ಚಿತ್ರದುರ್ಗದವರ ಸಹಾಯವನ್ನು ಕೇಳಿಕೊಳ್ಳಲು, ಭರಮಪ್ಪನಾಯಕನ ಸೇನೆಯವರು ಹೋಗಿ ಬಾಗೂರನ್ನು ಹಿಡಿದು ದರ್ಗಾಕೂಲಿಖಾನನ ವಶಮಾಡಿಕೊಟ್ಟರು. ಈ

ಮೊಗಲಾಯರಿಗೆ ಸಹಾಯ ಮಾಡಿದ್ದು.

ಉಪಕಾರಕ್ಕಾಗಿ ಆ ಮೊಗಲ್ ಅಧಿಕಾರಿಯು ಮಾವಿನಕಟ್ಟೆ ಗ್ರಾಮವನ್ನು ಭರಮಪ್ಪನಾಯಕನಿಗೆ ಕೊಟ್ಟನು. ಹೀಗೆ ರಾಜ ಭರಮಪ್ಪನಾಯಕನು ಬಹಳ ಯಶೋವಂತನಾಗಿ ಅನೇಕ ಕೋಟೆಗಳನ್ನೂ ಗ್ರಾಮಗಳನ್ನೂ ಹಿಡಿದು, ಅನೇಕ ಕೆರೆಗಳನ್ನು ಕಟ್ಟಿಸಿ, ಸೀಮೆಯನ್ನು ಅಭಿವೃದ್ಧಿಮಾಡಿಕೊಂಡು ರಾಜ್ಯಭಾರಮಾಡುತಾ ಇದ್ದನು. ಈತನ ಮಕ್ಕಳು, ಒಬ್ಬನಿಗಿಂತ ಒಬ್ಬ ಬಹು ಪರಾಕ್ರಮಶಾಲಿಗಳಾಗಿ ಸೀಮೆಗಳನ್ನು ಸಾಧಿಸುತಾ ಇದ್ದರು.

ಪ್ಲವ ಸಂ॥ ದಲ್ಲಿ ಈ ದುರ್ಗದ ದೊರೆಗಳ ಯಶಸ್ಸನ್ನು ಕೇಳಿ ಇವರನ್ನು ಮುರಿಯಬೇಕೆಂದು ವಿಜಾಪುರದಲ್ಲಿದ್ದ ದಿಲಾವರ್‌ಖಾನ್ ಬಾದಷಹನೂ ಮತ್ತು ಇವನ ಕಡೆಯ ಮರ್ಜ ಸಬ್‌ದಾರರೂ ಸಹಾ ಸೀರಾದಿಂದ ದುರ್ಗದ ಸೀಮೆಯ ಮೇಲೆ ಹೊರಟು ೨೦೦೦೦ ಕುದುರೆ, ೫೦೦೦೦ ಕಾಲು ಬಲ, ೨೦ ಫಿರಂಗಿ ಸಮೇತ ಹಿರಿಯೂರಿಗೆ ಬಂದು ಇಳಿದರು.

ವಿಜಾಪುರದವರು ದಂಡೆತ್ತಿ ಬಂದದ್ದು

ಈ ವರ್ತಮಾನ ತಿಳಿದ ಕೂಡಲೆ ಭರಮಪ್ಪನಾಯಕನು ತನ್ನ ಸೇನೆಯೊಡನೆ ಹೋದನು. ಈ ಉಭಯ ಸೇನೆಗೂ ಆದಿವಾಲದ ಮೈದಾನದಲ್ಲಿ ಘೋರವಾದ ಯುದ್ಧ ನಡೆಯಿತು. ರಾಜನಿಗೆ ಪೂರಾ ಗಾಯವಾಯಿತು. ಈ ಆ ಕ್ರೋಶದಮೇಲೆ ಭರಮಪ್ಪನಾಯಕನ ಮಕ್ಕಳಾದ ೧ ಮದಕರಿನಾಯಕ, ೨ ದಂಡಿನ ಜಂಪಂಣನಾಯಕ, ೩ ಭರಮಂಣನಾಯಕ, ೪ ಕಾಟಪ್ಪನಾಯ, ೫ ಲಿಂಗಂಣನಾಯಕ, ೬ ಗಂಗಂಣನಾಯಕ, ೭ ಕಿರಿ ಜಂಪಂಪಂಣನಾಯಕ. ಸಹಾ ಶತ್ರುಗಳ ದಂಡಿನ ಮೇಲೆ ಬಿದ್ದು ೧೮ ಅಂಬಾರಿಗಳಲ್ಲಿ ಕೂತು ಯುದ್ಧ ಮಾಡುತ್ತಿದ್ದ ಸರದಾರರನ್ನೂ ಹೊಡೆದು ನವಾಬನನ್ನು ಸೆರೆಹಿಡಿದರು. ಅಷ್ಟರಲ್ಲಿ ಶತ್ರುಸೇನೆಯವರು ಓಡಿಹೋದರು. ಆ ಯುದ್ಧದಲ್ಲಿ ನಾಲ್ಕು ಫಿರಂಗಿ, ೧೦ ಆನೆ, ಮುಂತಾದ ಸಾಮಾನು ಸಹಾ ದುರ್ಗದವರಿಗೆ ಸಿಕ್ಕಿದವು.

ಈ ಪ್ರಕಾರ ಜಯ ಹೊಂದಿದ ಸಮಾಚಾರವು ಎಲ್ಲೆಲ್ಲಿಯೂ ಹರಡಿಕೊಂಡಿತು. ರಾಜಾ ಭರಮಪ್ಪನಾಯಕನ ಮುಂದೆ ಯಾರೂ ನಿಲ್ಲು

ವುದಿಲ್ಲವೆಂದು ಖ್ಯಾತಿ ಬಂತು. ಉಳಿಕೆ ಪಾಳಯಗಾರರು ಯಾರೂ ಇವರ ಗೋಜಿಗೆ ಬರುವುದನ್ನು ಬಿಟ್ಟುಬಿಟ್ಟರು.

ಭರಮಪ್ಪನಾಯಕನ ನಿರ್ಯಾಣ.

ಶ॥ ೧೬೪೦ ನೇ ಪ್ಲವ ಸಂ॥ ಜ್ಯೇಷ್ಠ ಶು॥ ೫ ಸ್ಥಿರವಾರ ರಾಜಾ ಭರಮಪ್ಪನಾಯಕನು ಸ್ವರ್ಗಸ್ಥನಾದನು.

---

## ೧೨ ಸೇ ಅಧ್ಯಾಯ.

### ಭರಮಪ್ಪನಾಯಕ (ಪೂರೈಸಿತು.)

॥ ರಾಜ್ಯಭಾರಕ್ರಮ ॥

ಈ ಭರಮಪ್ಪನಾಯಕನು ಒಟ್ಟು ೩೨ ವರುಷ ಆಳಿದನು. ಈತನ ಆಳಿಕೆಯಲ್ಲಿ ದುರ್ಗದ ಸಂಸ್ಥಾನವು ಬಹಳ ಪ್ರಬಲಕ್ಕೆ ಬಂತು.

ದುರ್ಗದ ಸಂಸ್ಥಾನದ ಪ್ರಾಬಲ್ಯ

ಈತನು ದೊರೆಯಾದಾರಭ್ಯ ಕಾಟಕಾಯಗಳು ಬಹಳವಾಗಿದ್ದವು ರಾಯದುರ್ಗದ ಪಾಳಯಗಾರರು, ಹರಪನಹಳ್ಳಿ ಪಾಳಯಗಾರರು, ತರೀಕೆರೆ ಪಾಳಯಗಾರರು, ಗುಡೇಕೋಟೆಪಾಳಯಗಾರರು ಮೊದಲಾದ ಸುತ್ತ ಮುತ್ತಿನ ಸಂಸ್ಥಾನದವರು ಯಾವಾಗಲೂ ನೆವ ನೆವಗಳಲ್ಲಿ ಯುದ್ಧಕ್ಕೆ ಬಂದು ತೊಂದರೆಮಾಡುತ್ತಲೇ ಇದ್ದರು. ಭರಮಪ್ಪನಾಯಕನು ಇವರುಗಳೆಲ್ಲರನ್ನೂ ಜೈಸುತಾ ಬಂದಹಾಗೆಲ್ಲಾ ಈ ನೆರೆ ಹೊರೆ ಶತ್ರುಗಳು ಮರಾಟೆ ದಂಡಿನವರನ್ನೂ ಮತ್ತು ಸೀರ್ಯದ ಮೊಗಲಾಯಿ ನವಾಬರುಗಳನ್ನೂ ಎತ್ತಿಕಟ್ಟಿದರು. ತಾವು ಸ್ವತಂತ್ರವಾಗಿ ದುರ್ಗದವರ ಮೇಲೆ ನಿಲ್ಲಲು ಭಯಪಟ್ಟು ಹೊರಗಿನ ಮುಸಲ್ಮಾನ್ ಜನರ ಮತ್ತು ಮರಾಟೆಯವರ ಹಿಂದೆ ನಿಂತು ಸಹಾಯವನ್ನು ಮಾಡುತಾ ಬಂದರು. ಎರಡು ಮೂರು ಸಾರಿ ತುರುಕರೂ, ಮರಾಟೆಯವರೂ ಭಾರಿಯಾದ ಫೌಜಿನೊಡನೆ ಯುದ್ಧಕ್ಕೆ ನಿಂತರು. ಇವರುಗಳೆಲ್ಲರನ್ನೂ ಕೆಲವು ಸಮಯದಲ್ಲಿ ಉಪಾಯದಿಂದಲೂ ಮತ್ತೆ ಕೆಲವು ಸಂದರ್ಭದಲ್ಲಿ ಪರಾಕ್ರಮದಿಂದಲೂ ಭರಮಪ್ಪನಾಯಕನು ಗೆದ್ದನು. ಕಡೆಗೆ ಶತ್ರುಗಳು ಈ ಸಂಸ್ಥಾನದ ಗೋಜಿಗೆ

ಬರಲು ಭಯಪಡುತಿದ್ದರು. ಈ ದೊರೆಗೆ ಮಕ್ಕಳು ವಿಶೇಷವಾಗಿದ್ದರು. ಆ ರಾಜಕುಮಾರರ ಪರಾಕ್ರಮವೂ ರಾಜ್ಯಕ್ಕೆ ಹೆಸರುವಾಸಿಯುಂಟಾಗಲು ದೊಡ್ಡ ಕಾರಣವಾಗಿತ್ತು. ಇವನಿಗೆ ದೊರೆತನವಾದಾಗಿನಿಂದ ಇವನು ಮರಣ ಹೊಂದುವವರೆಗೂ ಯುದ್ಧವಿಲ್ಲದ ದಿವಸವೇ ಇರಲಿಲ್ಲ. ಇಷ್ಟಾದರೂ ಶತ್ರುಗಳು ಇವನನ್ನು ಕಂಡು ಹೆದರುವಹಾಗೂ ಉದಾಸೀನರು ಇವನ ಸ್ನೇಹವನ್ನು ಬಳಸುವಹಾಗೂ ಮಾಡಿಕೊಂಡನು. ಇವನ ದಿವಸದಲ್ಲಿ ಹೊಸ ಸೀಮೆಗಳು ಜಯಿಸಲ್ಪಟ್ಟವು, ಮರಾಟೆಯವರೂ ಮೊಗಲಾಯಿ ಸರದಾರರೂ ಇವನ ಸಹಾಯವನ್ನು ಬಯಿಸಿ ಕೆಲವು ಸೀಮೆಗಳನ್ನು ಇವನಿಗೆ ಕೊಟ್ಟರು.

ಈ ಆಳಿಕೆಯಲ್ಲಿ ಆದ ಕಟ್ಟಡಗಳು

ಈ ದೊರೆಯಕಾಲದಲ್ಲಿ ೩೦ ದೇವಸ್ಥಾನಗಳೂ ೩-೪ ಅರಮನೆಗಳೂ, ಈ ಸೀಮೆಯ ಸರಹದ್ದುಗಳಲ್ಲಿ ಐದಾರು ಬಲವಾದ ಗಡಿಕೋಟೆಗಳೂ ಭರಮಸಾಗರದಕೆರೆ, ಅಬ್ಬನಾಯಕನ ಹಳ್ಳಿ ಕೆರೆ, ಭೀಮಸಮುದ್ರದಕೆರೆ, ಮೊದಲಾದ ಭಾರೀಕೆರೆಗಳೂ, ಮತ್ತು ಇನ್ನೂ ಇತರ ಇಪ್ಪತ್ತು ಕೆರೆಗಳೂ, ಚಿತ್ರದುರ್ಗದ ಊರಸುತ್ತ ಇರುವ ಹೊರಸುತ್ತಿನ ಭಾರೀ ಕೋಟೆ, ಅನೇಕ ಕೋಟೆಬಾಗಿಲುಗಳೂ, ಬುರಜುಗಳೂ ಇವೇ ಮೊದಲಾದ ಹಲವು ದೊಡ್ಡ ಕೆಲಸಗಳನ್ನು ಮಾಡಿಸಿದರು. ಗ್ರಾಮಗಳ ಜಲವಸತಿಗಾಗಿ ಅನೇಕ ಭಾವಿಗಳನ್ನೂ, ಕುಂಟೆಗಳನ್ನೂ ತೆಗೆಯಿಸಿದರು.

ಗುಳ್ಳೆರೋಗ.

ಈ ಭರಮಪ್ಪನಾಯಕನ ಆಳಿಕೆಯಲ್ಲಿ ಚಿತ್ರದುರ್ಗದ ಸೀಮೆಗೆ ದೊಡ್ಡ ಕೇಡು ಸಂಭವಿಸಿತು. ಸ್ವಭಾನು ಸಂ॥ದಲ್ಲಿ ಎಂದರೆ ಶ॥ ೧೬೨೫ ಅಥವಾ ೧೭೦೩ ನೇ ಈ ಇಸವಿಯಲ್ಲಿ ಮನೆಗಳಲ್ಲಿ ಇಲಿಗಳು ಬಿದ್ದು ಗರ್‍ರನೆ ತಿರುಗಿ ಸಾಯುತಿದ್ದವು. ಕೂಡಲೇ ಕತ್ತಿನ ಸಂದಿ, ಕಂಕುಳಸಂದಿ, ತೊಡೆಸಂದಿ, ಮೊದಲಾಗಿ ದೇಹದಲ್ಲಿ ಗುಳ್ಳೆ ಎದ್ದು ಜನರು ಸಾಯುತಾ ಇದ್ದರು. ಇದರಲ್ಲಿ ಪ್ರಜೆಗಳು ಬಹಳ ನಷ್ಟವಾದರು. ಹೀಗಾದಕಾರಣ ಜನರು ಕೊಂಪೆಗಳನ್ನು ಬಿಟ್ಟು ಹೊರಗೆ ಹೋಗಿ ವಾಸಮಾಡುತಿದ್ದರು. ಮತ್ತು ಜನರೆಲ್ಲರೂ ಊರ ಆಚೆ ಚೇಳು ಗುಡ್ಡದ ತಪ್ಪಲಲ್ಲಿ ಗುಡಿಸಲ ಹಾಕಿಕೊಂಡಿ

ದ್ದರು. ತಾರಣ ಸಂ॥ ದಲ್ಲಿ ಈ ರೋಗದಬಾಧೆಯನ್ನು ಸಹಿಸಲಾರದೆ ದೊರೆ ಮೊದಲಾಗಿ ವಿಶಿಷ್ಟ ಜನರೂ ಚಿತ್ರದುರ್ಗದ ಊರನ್ನು ಬಿಟ್ಟು ದುರ್ಗದ ಊರಬಾಗಿಲಿಗೆ ಕಲ್ಲು ಮುಳ್ಳುಹಾಕಿ ಯಾರೂ ಒಳಕ್ಕೆ ಪ್ರವೇಶಮಾಡದಹಾಗೆ ಊರಿನ ಸುತ್ತಲೂ ಕಾವಲು ಇಟ್ಟರು. ಊರೊಳಗೆ ದೇವರುಗಳಿಗೆ ಪೂಜೆಕೂಡಾ ಇಲ್ಲವಾಯಿತು.

ಹೊಸ ಏರ್ಪಾಡುಗಳು

ಈ ದೊರೆಯುಕಾಲದಲ್ಲಿ ಕೆಲವು ಹೊಸ ಏರ್ಪಾಡುಗಳನ್ನು ಮಾಡಿದರು. ಈ ದೊರೆಗಳ ಸಂಸಾರವೆಲ್ಲಾ ಮಹಾಲಯ ಅಮಾವಾಸ್ಯೆ ಕಟ್ಟಲೆ ಮಾಡುವುದಕ್ಕಾಗಿ ಪ್ರತಿವರುಷವೂ ಕಣಕುಪ್ಪೆಗೆ ಹೋಗುತಾ ಇದ್ದರು. ಈ ಆಳಿಕೆಯಲ್ಲಿ ಅದನ್ನು ತಪ್ಪಿಸಿ ಆ ಸ್ಥಳಕ್ಕೆ ಭಾರತದ ಹುಣ್ಣಿಮೆಯಲ್ಲಿ ಹೋಗಲು ಆರಂಭ ಮಾಡಿದರು. ಆ ಕಾಲದಲ್ಲಿ ರಾಜಕುಮಾರರೂ ರಾಜಕುಮಾರಿಯರೂ ಸಹಾ ಬೇವಿನ ಉಡಿಗೆ ಉಟ್ಟು ಬಳಗಸಮೇತ ಹೊರಡುತಿದ್ದರು. ಹಾಗೆ ಹೋಗಿ ಉತ್ಸವಾಂಬನಿಗೂ, ಕಾಟಮ್ಮ ದೇವರಿಗೂ, ಸೇವೆಮಾಡಿ ಬರುತಿದ್ದರು. ಹಾಗೆ ಹೋಗುವಾಗ,

(೧) ಗ್ರಾಮದ ತಳವಾರರು ಗ್ರಾಮ ೧ಕ್ಕೆ ೧ ಟಗರು, ಒಂದು ತುಪ್ಪದ ಕುಂಭ ಸಹಾ ತರಬೇಕು.

(೨) ದೊರೆಯು ಜೋಗಿಗೆ ಹೊರಟಾಗ ಪ್ರತಿಗ್ರಾಮದ ಗೌಡನೂ ಗ್ರಾಮ ೧ಕ್ಕೆ ೧⅟₂ ವರಹ ಜೋಗಿ ಕಾಣಿಕೆಯನ್ನು ಹಾಕಬೇಕು.

(೩) ಭಾದ್ರಪದ ಮಾಸದ ವಿನಾಯಕನ ಚೌತಿಯಲ್ಲಿ ವಿಶಿಷ್ಟಮಠದ ಐಯ್ಯನವರೂ ಕರ್ಜೀಕಾಯಿ ಮಾಡಿಕೊಂಡು ಬಂದು ಅದನ್ನು ಅರಮನೆಯ ಬೊಕ್ಕಸದ ಮನೆಗೆ ಒಪ್ಪಿಸಬೇಕು.

(೪) ಜಾಡರ ಮಗ್ಗ ೧ಕ್ಕೆ ೧ ನೂಲಹಗ್ಗದಪ್ರಕಾರ ಪ್ರತಿವರುಷವೂ ಜಾಡರು ತಂದು ಅರಮನೆಗೆ ಒಪ್ಪಿಸಬೇಕು.

(೫) ಗ್ರಾಮಾಂತರಗಳಿಂದ ಹಜಾಮರು ತಿಂಗಳಿಗೆ ಒಂದು ಸಾರಿ ಸರದೀಮೇರೆ ದುರ್ಗಕ್ಕೆ ಬಂದು ಖಾಸಾಪಾಗದ ಕುದುರೆಗಳ ಮೈಕೂದಲನ್ನೂ ಅಯಾಲನ್ನೂ ಕತ್ತರಿಸಬೇಕು.

(೬) ಗ್ರಾಮದ ಜೀಗಾರರು (ಮಾದಿಗರು) ಖಾಸಾ ಕುದುರೆಗೆ ದಿನ ೧ಕ್ಕೆ ಹಸಿಹುಲ್ಲು ೧೦ ಹೊರೆ ಪ್ರಕಾರ ಸರದೀ ಮೇರೆ ತರಬೇಕು

(೭) ಗ್ರಾಮ ೧ಕ್ಕೆ ೨ ಆಳುಗಳು ಗ್ರಾಮಾಂತರಗಳಿಂದ ತಿಂಗಳಿಗೆ ೧ ಸಾರಿ ದುರ್ಗಕ್ಕೆ ಬಂದು ಕರಡ ಹುಲ್ಲನ್ನು ಕುಯಿದು ಬಣವೆ ಹಾಕಬೇಕು.

ಈ ಪ್ರಕಾರ ನಿರ್ಮಾಡನ್ನು ಮಾಡಿಸಿದರು.

ಚಿನ್ನದ ಮನೆ.

ವಿರೋಧಿ ಸಂ॥ ದಲ್ಲಿ ಖಾಸಾ ನಾಗತಿಯರಿಗೂ, ಕುಮಾರರಿಗೂ, ಕುಮಾರಿಗಳಿಗೂ, ಕುದುರೆಗಳಿಗೂ, ಬೇಕಾದ ಆಭರಣಗಳನ್ನು ಮಾಡಿಸುವುದಕ್ಕೆ ಮೇಲ್‌ದುರ್ಗದ ಅರಮನೆಯಲ್ಲಿ ಒಂದು ಚೌಕಿ ಕಟ್ಟಿಸಿ ಅವರಲ್ಲಿ ಅಗಸಾಲೆಗಳನ್ನು ಇರಿಸಿದರು. ಅಗಸಾಲೆ ಒಬ್ಬನಿಗೆ ತಿಂಗಳಿಗೆ ದುರ್ಗಿ ವರಹ ೨½ ರ ಪ್ರಕಾರ ೮ ಜನರನ್ನು ನೇಮಕಮಾಡಿ ಬೊಕ್ಕಸದಿಂದ ನಾಣ್ಯಗಳನ್ನು ತಂದುಕೊಟ್ಟು ಚಿನ್ನವಾರದ ಕಟ್ಟಲೇ ಪ್ರಕಾರ ಚಿನ್ನ ಬೆಳ್ಳಿ ಸಹಾ ತೆಗೆದುಕೊಂಡು ಬೇಕಾದ ವಸ್ತುಗಳನ್ನು ಮಾಡಿಸಿದರು. ಈ ವಿಷಯದಲ್ಲಿ ಲೆಕ್ಕಪತ್ರ ಬರೆಯುವುದಕ್ಕೆ ಬಿಳಿಚೋಡು ಹೇಮಣ್ಣನೆಂಬಾತನನ್ನು ನೇಮಿಸಿದ್ದರು. ಈ ಕೆಲಸಮಾಡತಕ್ಕ ಮನೆಗೆ ಚಿನ್ನದ ಮನೆ ಎಂದು ಹೆಸರಾಯಿತು. ಅಲ್ಲಿ ಅಧಿಕಾರಿಯಾಗಿದ್ದವನಿಗೆ ಚಿನ್ನದ ಮನೇ ಗುರಿಕಾರನೆಂದು ಹೆಸರಾಯಿತ್ತು.

ಸಮರ ವಿಜಯ

ಈ ಭರಮಪ್ಪನಾಯಕನ ಪರಾಕ್ರಮವನ್ನು ಹೊಗಳಿ ಭಟರಾಜರು ಹೇಳುವ ಸಮರ ವಿಜಯವೆಂಬ ಕೆಲವು ಪದ್ಯಗಳನ್ನು ಬರೆದಿದಾರೆ. ಆ ಪದಗಳಲ್ಲಿ ಕೆಲವನ್ನು ಕೆಳಗೆಹಾಕಿದೆ.

ಭುವನದೊಳ್ ಚಿನ್ಮೂಲಾದ್ರಿಯ ರಾಜಧಾನಿಯೋಳ್ ।
ಯುವರಾಜಸ್ಥಿರಪಟ್ಟಭದ್ರ, ಕರುಣಸಮುದ್ರ, ಪರಸೈನ್ಯ ಛಿದ್ರ ॥
ಶರಧಿ ಮಧ್ಯದಲಿ ಚಂದಿರನುಸಿದಂದದಲಿ ।
ವರಕಾಮಗೇತಿ ವಂಶದೊಳು ಪುಟ್ಟಿ, ಸೌಖ್ಯದೊಳು ಬಾಳು, ಕೃಪಾಳು ॥
ಖಾನಖಾನರನೆಲ್ಲಸದೆದು ಕಪ್ಪವತಂದೆ ।
ಈ ನಿನ್ನ ಶೌರ್ಯಕೆಣೆಇಲ್ಲ, ರಣರಂಗಮಲ್ಲ, ನಿನಗೆ ಸರಿಇಲ್ಲ ॥
ಅದಕಂಡುಮೆಚ್ಚಿ ಪಾಛಾವ ದೊಡ್ಡೇರಿಯನು ಮುದದಿಂದ ಕೊಡಲು ಕೈಕೊಂಡ ॥
ಕದನ ಪ್ರಚಂಡ ।
ಭಾಪುದೋರ್ದಂಡ ॥
ಮೈಲಾರ ಮೊದಲಾದ ಸೀಮೆಗಳ ಜೈಸಿಕೊಂ । ಡೇಳಿಗೆಯ ಭುಜಶಕ್ತಿಯಿಂದೆ ।
ದುರ್ಗ ಕೈತಂದೆ ।
ತೂರ್ಯರವದಿಂದೆ ॥
ಇದಿರುದಂಡನ-ಬಿಟ್ಟು ಒದಗಿಸಮನಾಳಗದಿ ।
ಕದನವನುಗೆಲಿದ ಹಮ್ಮೀರ ।
ಭಲರೆಮೊನೆಗಾರ ।
ಅಸಹಾಯಶೂರ ॥
ಚಿನ್ಮೂಲಗಿರೀಶ ।
ಚನ್ನಿಗವಿಲಾಸ ।
ಮೊನ್ನೆಯಲಲಾಮ ।
ಅಮಿತಗುಣಧಾಮ ॥
ಕೊಡಗೈಯ್ಯ ಕರ್ಣ ।
ಕರುಣಾಸಂಪೂರ್ಣ ।
ಸುಡಿರಾಮಬಾಣ ॥
ಸೂತನಶರೀರ । ಮಾರನವತಾರ । ನೆರೆಪುಣ್ಯಕಾಂತ ।
ಪರಮಾಯುಷಂತ ॥

## ೧೩ ನೇ ಅಧ್ಯಾಯ.

## ಹಿರೀ ಮದಕರಿನಾಯಕ.

ಹಿರೀ ಮದಕರಿನಾಯಕನಿಗೆ ಪಟ್ಟವಾದದ್ದು.

ಶ॥ ೧೬೪೩ ನೇ ಪ್ಲವ ಸಂ॥ ಜ್ಯೇಷ್ಠ ಶು॥ ೧೩ ಸ್ಥಿರವಾರದಲ್ಲು ಭರಮಪ್ಪನಾಯಕನ ಹಿರೀ ಮಗ ಹಿರೀ ಮದಕರಿನಾಯಕನಿಗೆ ಚಂಪಕಾ ಸಿದ್ಧೇಶ್ವರನ ಗುಡಿಯಲ್ಲಿ ಪಟ್ಟಾಭಿಷೇಕವಾಯಿತು. ದುರ್ಗದ ಸೇನೆಯು ನವಲುಬಂಡೆಕೋಟೆ, ಸೋವಿನಹಳ್ಳಿಕೋಟೆ, ಇವೆರಡನ್ನೂ ತೆಗೆದುಕೊಂಡಿತು.

ಶೋಭಕೃತು ಸಂ॥ ದಲ್ಲಿ ಅಮಕೊಂದಿ ಕೋಟೆಯನ್ನು ಹಲ್ಲಾ ಮಾಡಿ ತೆಗೆದುಕೊಂಡರು. ಇದೇ ಸಂ॥ ದಲ್ಲಿ ಶ್ರೀರಂಗಪಟ್ಟಣದವರು ಚಿತ್ರದುರ್ಗದ ಪಾಳಯಗಾರರನ್ನು ತಸ್ನ ಸಮಾನರಾದ ಮಿತ್ರರಂತೆ ಭಾವಿಸಿ ಪಾಭಾ ಎಂಬ ರಾಯಭಾರಿಯ ಸಂಗಡ ರಾಜಗೋಪಾಲನೆಂಬ ಆನೆ ಒಂದು, ಕುದುರೆ ಒಂದು, ಫಿರಂಗಿ, ಮೊಲಾದ್ದನ್ನು ಸಸರಾಗಿ ಕಳುಹಿಸಿದರು. ಸೀರ್‍ಯದ ಸುಬೇದಾರನ ಮಗನು ಸಂಣಕ್ಕಿ ಬಾಗೂರ ಕೋಟೆ, ಹೊದಿಗೆರೆ ಕೋಟೆ ಇವುಗಳನ್ನು ದುರ್ಗದವರಿಗೆ ಕೊಟ್ಟನು.

ರಾಜ್ಯ ಸಂಪಾದನೆ.

ಈ ಕಾಲದಲ್ಲಿ ರಾಯದುರ್ಗದ ಸಂಸ್ಥಾನದವರು ರಾತ್ರಿ ಕಾಲದಲ್ಲಿ ಮೊಳಕಾಲ್ಮುರುವಿನ ಕೋಟೆಗೆ ಇಳೀ ಬಿದ್ದರು. ಆದರೆ ಕೋಟೆಯೊಳಗಿದ್ದ ದುರ್ಗದ ಭಟರು, ಅವರನ್ನು ಹೊಡೆದು ಓಡಿಸಿದರು. ಇದೇ ಶೋಭಕೃತು ಸಂ॥ ದಲ್ಲಿ ಆನೇಗೊಂದಿರಾಯರ ಮಗಳು ಗಂಡೋಬಳಮ್ಮ ನಾಗತಿಯನ್ನೂ ಕನಕಗಿರಿ ವೆಂಕಟಾಚಲ ನಾಗತಿಯನ್ನೂ ಸಹಾ ಕೊಟ್ಟು ಹಿರೀ ಮದಕರಿನಾಯಕನಿಗೆ ಮದುವೆಯಾಯಿತು. ಸೀರ್‍ಯದ ಸುಬೇದಾರನಿಗೆ ಸೇರಿದ್ದ ಅಜ್ಜಂಪುರ, ದೊಂಳ, ಈ ಎರಡು ಕೋಟೆಗಳನ್ನೂ ದುರ್ಗದವರು ಹಿಡಿದು ಸೇರಿಸಿಕೊಂಡರು. ಕೂಡಲೆ ಸೀರ್‍ಯದ ಸುಬೇದಾರ ಕಾರಖಾನನೂ, ಸಿದ್ಧೋಜಿ ಮತ್ತು ಮಲೆನಾಡಿನವರೂ ಸಹಾ ಬಂದು ಅಜ್ಜಂಪುರದ ಕೋಟೆಗೆ ಮುತ್ತಿಗೆ ಹಾಕಿ ಹಿಂತಿರುಗಿ ತೆಗದುಕೊಂಡರು.

ಪರಾಭವ ಸಂ॥ ದಲ್ಲಿ ದೊಡ್ಡದಾಗಿ ಕ್ಷಾಮ ಪ್ರಾಪ್ತವಾಯಿತು.

ವೀರಕ್ಷಾಮ.

ಜನರಿಗೆ ಧರ್ಮಕ್ಕೆ ಅನ್ನಾ ಹಾಕಿಸಲು ದೊರೆಯು ಏರ್ಪಾಡು ಮಾಡಿದನು. ಇದೇ ಸಮಯದಲ್ಲಿ ಪೀರೋಜಿ ಎಂಬ ಮರಾಟೆ ಸರದಾರನ ದಂಡು ಬಂದು, ಕೂನ ಜೇವಿನ ಬಳಿಯಲ್ಲಿ ಇಳಿಯಿತು. ದುರ್ಗದ ಸೇನೆಯು ಅವರ ಮೇಲೆ ಜಗಳಕ್ಕೆ ತೊಡಗಿತು. ಆದರೆ ಮರಾಟೆಯವರಿಗೆ ಜಯವಾಯಿತು, ದಳವಾಯಿ ಭರಮಣ್ಣನನ್ನು ಶತ್ರುಗಳು ಸೆರೆಹಿಡಿದುಕೊಂಡು ಹೋದರು ಹಾಗಲವಾಡಿ ಸಂಸ್ಥಾನದವರಿಗೂ ದುರ್ಗದವರಿಗೂ ಕೈ ಕೈ ಸೇರಿತು ಶತ್ರುಗಳು ಹರತಿಕೋಟೆಯನ್ನು ಮುತ್ತಿದರು. ತರುವಾಯ ಶತ್ರುಗಳಾದ ಸಮೀಪ ಸಂಸ್ಥಾನದವರೂ, ಇತರ ಮರಾಟೆಯವರೂ, ಸೀರ್‍ಯದ ಸುಬೇದಾರನ ಕಡೆಯವರೂ, ಸಹಾ ಆಗಾಗ್ಯೆ ದುರ್ಗದ ಗಡಿಕೋಟೆಗಳಮೇಲೆ ಬೀಳುವುದು, ದುರ್ಗದವೀರರು ಶತ್ರುಗಳನ್ನು ಹೊಡೆದು ಓಡಿಸುವುದು, ಒಂದೊಂದುವೇಳೆ ತಾವೂ ಸೋತುಹೋಗುವುದು, ಹೀಗೆ ಚಿಲ್ಲರೆ ಕದನಗಳು ಈ ಆಳಿಕೆಯಲ್ಲಿ ವಿಶೇಷವಾಗಿ ಜರುಗಿದವು. ಮನ್ಮಥ ಸಂ॥ ಆಶ್ವೀಜ ಶು॥ ೧೦ ದಿವಸ ಹುಚ್ಚುಮಳೆ ಆರಂಭವಾಗಿ ಅದೇ ಕಾರ್ತೀಕ ಶು॥ ೫ ವರೆಗೆ ಸುರಿದು ಬಹಳ ನಷ್ಟವಾಯಿತು.

ರುಧಿರೋದ್ಗಾರಿ ಸಂ॥ ದಲ್ಲಿ ಮಲೆ ನಾಡಿನವರು ಮೋಸದಿಂದ

ರಾಮಗಿರಿಯ ಮುತ್ತಿಗೆ.

ಚಿತ್ರದುರ್ಗದ ಸೀಮೆಗೆ ಸೇರಿದ ರಾಮಗಿರಿ ದುರ್ಗವನ್ನು ಹಿಡಿದುಕೊಂಡರೆಂದು ಸಮಾಚಾರ ಬಂತು. ಹಿರೀ ಮದಕರಿನಾಯಕನು ಚಳ್ಳಕೆರೆ ನಡುವೆಂಬ ಸ್ಥಳದಲ್ಲಿದ್ದನು. ಈ ಮುತ್ತಿಗೇ ಸಂಗತಿ ಕೇಳಿ ದೊರೆಯು ಸೇನೆಯೊಡನೆ ಹೊರಟು ಆ ಸ್ಥಳಕ್ಕೆ ಹೋಗಿ ಯುದ್ಧಕ್ಕೆ ಸನ್ನದ್ಧನಾದನು. ಇವನನ್ನು ಎದುರಿಸಲು ಮಲೆನಾಡಿನವರು, ಹರಪನಹಳ್ಳೀ ಸೋಮಶೇಖರನಾಯಕ, ಆನೇಗೊಂದಿಯ ಫೌಜು, ರಾಯದುರ್ಗದ ದಂಡು, ಸವಣೂರಿನ ದಂಡು, ಇತರ ಚಿಲ್ಲರೆ ಪಾಳಯಗಾರರು, ಇವರೆಲ್ಲಾ ಸೇರಿಕೊಂಡು ೮೦೦೦ ಕುದುರೆ ೨೦೦೦೦ ಕಾಲು ಬಲ ಸಮೇತವಾಗಿ ಹೋದಿಗ್ಗೆರೆ ಬಳಿಯಲ್ಲಿ ಬಂದು ಇಳಿದು ರಾಮಗಿರಿಯ ಮುತ್ತಿಗೇ ಎಬ್ಬಿಸಲು ಉದ್ಯುಕ್ತರಾಗಿ ಕೋಟೆ

ಯೊಳಕ್ಕೆ ಹೊಕ್ಕು ದುರ್ಗದ ಸೇನೆಯೊಡನೆ ಯುದ್ಧಕ್ಕೆ ಆರಂಭಿಸಿದರು. ಈ ಕದನದಲ್ಲಿ ಚಿತ್ರದುರ್ಗದ ದೊರೆಗೆ ಬಲಗಡೇ ದವಡೆಯಮೇಲೆ ಅಂಬಿನ ಗಾಯವಾಯಿತು. ಆಗ ಆತನು ಡೇರೆಗೆ ಬಂದು ಗಾಯಕ್ಕೆ ಔಷಧಿ ಹಾಕಿಸಿ ಕಟ್ಟಿಸಿಕೊಂಡು ಆನೆಯನ್ನು ಏರಿ ಪುನಃ ಯುದ್ಧರಂಗಕ್ಕೆ ಹೊರಟು ಫಿರಂಗಿಯನ್ನು ಕೋಟೆಗೆ ಹೊಡೆಯಿಸಿ ಮುತ್ತಿಗೇ ಹಾಕಿದನು. ಶತ್ರುಗಳು ಕೋಟೆಯನ್ನು ಬಿಟ್ಟು ಓಡಿಹೋದರು ಕೋಟೆಯು ಚಿತ್ರದುರ್ಗದವರ ವಶವಾಯಿತು. ಹಗೆಗಳು ಆ ಕೋಟೆಯಲ್ಲಿ ಬಿಟ್ಟು ಓಡಿಹೋದ ೭ ಕಬ್ಬಿಣದ ಎರಕದ ನಗಾರಿಗಳು ಸಿಕ್ಕಿದವು. ಈ ಯುದ್ಧವು ಬಹು ಘೋರವಾಗಿ ನಡೆಯಿತು. ಕದನದ ಮಧ್ಯಕಾಲದಲ್ಲಿ ಹರಪನಹಳ್ಳಿಯ ಸೋಮಶೇಖರ ರಾಯನು ಕೂತಿದ್ದ ಆನೆಯೂ, ಹಿರೀ ಮದಕರಿನಾಯಕನ ಆನೆಯೂ ಬಂದಕ್ಕೊಂದು ಸಮೀಪದಲ್ಲಿ ಸೇರಿ ಜಗಳಕ್ಕೆ ಆರಂಭವಾಯಿತು. ಆಗ ಸೋಮಶೇಖರರಾಯನು ತನ್ನ ಕೈಲಿದ್ದ ಉಕ್ಕಿನ ಅಲಗ ಹಾಕಿದಂಥಾ ಕರೋಲದಿಂದ ದುರ್ಗದ ದೊರೆಯನ್ನು ತಿವಿಯಲು ಯತ್ನಿಸಿದನು. ಆಗಧೀರನಾದ ಹಿರೀ ಮದಕರಿನಾಯಕನು ಆ ಕರೋಲಿನ ಅಲಗನ್ನೇ ಹಿಡಿದು ಎಳೆದು ತೆಗೆದುಕೊಂಡನು. ಸೋಮಶೇಖರನು ದುರ್ಗದ ದೊರೆಯ ಕೈಯ್ಯಲ್ಲಿದ್ದ ಕತ್ತಿಯನ್ನು ಕಿತ್ತುಕೊಂಡು ಎರಕದ ಕಠಾರಿಯನ್ನು ಉಳ್ಳಂಬಿರಿಸಿಗೂ ಎಸೆಯಲು, ದುರ್ಗದ ರಾಜನು ಅದನ್ನು ಕೈಯ್ಯಲ್ಲಿಹಿಡಿದುಕೊಂಡನು. ಹರಪನಹಳ್ಳಿಯ ದೊರೆಗೆ ಮುಖದ ಮೇಲೆ ಅಂಬುತಗಲಿ ಗಾಯವಾಗಿ ಅಲಗು ಮುರಿದು ಮೂಳೆಯೊಳಗೆ ನಾಟಿಕೊಂಡಿತು. ಶತ್ರುಗಳು ದುರ್ಗದವರ ಏಟನ್ನು ತಡೆಯಲಾರದೆ ದಿಕ್ಕಮುರಿದು ಓಡಿದರು. ಈ ಪ್ರಕಾರ ಜಯಶೀಲನಾದ ಹಿರೀ ಮದಕರಿನಾಯಕನು ಸೀರ್‍ಯದ ಸುಬೇದಾರನಿಗೆ ಭೇಟಿಕೊಟ್ಟು ಭಾದ್ರಪದ ಶು॥ ೧೦ ಯಲ್ಲು ದುರ್ಗಕ್ಕೆ ಹಿಂತಿರುಗಿ ಬಂದನು.

ಹಿರೀ ಮದಕರಿನಾಯಕನ ಪೌರುಷ.

ದೇಶದಲ್ಲಿ ರಾಜ್ಯಭಾರದ ಏರ್ಪಾಡು.

ತರುವಾಯ ದೊರೆಯು ಒಳದೇಶದ ಆಡಳಿತಗಳನ್ನು ನಡಿಸಲು ಉದ್ಯುಕ್ತನಾದನು. ತನ್ನ ತಮ್ಮ ಗಂಗಣ್ಣನಾಯಕನನ್ನು ಮುರುಗಿ ಸ್ವಾಮಿಗಳ ಸೇವೆಗೆ ನಿಲ್ಲಿಸಿದನು. ಮೊಳಕಾಲ್ಮುರು ಪ್ರಾಂತಕ್ಕೆ ಅಧಿಕಾರಿಯಾಗಿ ಕಾಟಪ್ಪನಾಯಕನನ್ನೂ, ಕಣಕುಪ್ಪೆಗೆ ಜಂಪಣ್ಣನಾಯಕನನ್ನೂ, ಹೊಸದುರ್ಗದ ಪ್ರಾಂತಕ್ಕೆ ದಂಡಿನ ಜಂಪಣ್ಣನಾಯಕ ಭರಮಣ್ಣನಾಯಕ ಇವರುಗಳನ್ನೂ ನೇಮಕಮಾಡಿದನು. ಹುಚ್ಚಲಿಂಗಣ್ಣನಾಯಕನನ್ನು ಸೇನಾಪತಿಯಾಗಿ ಮಾಡಿ ದುರ್ಗದಲ್ಲಿಯೇ ಇರಿಸಿಕೊಂಡನು. ಈ ಲಿಂಗಣ್ಣನಾಯಕನು ಗರಡೀ ಸಾಧನೆಯಲ್ಲಿ ಬಹಳ ನಿಸ್ಸೀಮ, ದೇಹದಲ್ಲಿ ಬಹು ಶಕ್ತಿಯುಳ್ಳವನು. ಅರಮನೆಗೆ ನಂಟರು ಮೊದಲಾದ ಜನರು ಬಂದು ಕಂಬವನ್ನು ಒರಗಿಕೊಂಡು ಕೂತಿದ್ದರೆ, ಆ ಕಂಬವನ್ನು ರಹಸ್ಯವಾಗಿ ಮೇಲಕ್ಕೆ ಎತ್ತಿ ಅವರ ಪಕ್ಕದಲ್ಲಿ ಕೂತಿದ್ದವರ ಅಂಗಿಬಟ್ಟೆಯನ್ನು ಅದರ ಕೆಳಕ್ಕೆ ಸಿಕ್ಕಿಸುತಿದ್ದನು. ಇದನ್ನು ಅರಿಯದೆ ಆ ಜನರು ಮೇಲಕ್ಕೆ ಏಳುವಾಗ ಬಟ್ಟೆ ಎಳೆದು ಮುಗ್ಗರಿಸುವಹಾಗಾಗುತಿತ್ತು. ಇದನ್ನು ಕಂಡು ದರ್ಬಾರಿನವರೆಲ್ಲಾ ನಗುವಹಾಗೆ ವಿನೋದವಾದ ಸಾಹಸಗಳನ್ನು ಮಾಡುತಿದ್ದನು.

ಉಳಿಕೆ ಅಣ್ಣತಮ್ಮಂದಿರು ಗಡಿ ದುರ್ಗಗಳಲ್ಲಿ ಸೇನಾಪತಿಗಳಾಗಿದ್ದರು. ಇವರಿಗೆಲ್ಲಾ ಯುದ್ಧದ ಸಾಮಾನುಗಳನ್ನು ದೊರೆಯು ವಿಶೇಷವಾಗಿ ಒದಗಿಸಿಕೊಟ್ಟಿದ್ದನು. ಕ್ರೋಧನ, ಅಕ್ಷಯ ಸಂ॥ ಗಳಲ್ಲಿ ರಾಯದುರ್ಗದ ಪಾಳಯ ಪಟ್ಟಿಗೆ ಸೇರಿದ್ದ ೮-೧೦ ಗ್ರಾಮಗಳೂ ಆ ಕೋಟೆಗಳೂ ಜೈಸಲ್ಪಟ್ಟು ಚಿತ್ರದುರ್ಗದ ಆಳಿಕೆಗೆ ಬಂದವು.

ಶ॥ ೧೬೭೯ ನೇ ವಿಭವ ಸಂ॥ ಪುಷ್ಯ ಶು॥ ೧೦ ಗುರುವಾರ ಭೂಕಂಪವಾಗಿ ಗರ್ಜನೆಯಾಯಿತು.

---

## ೧೫ ನೇ ಅಧ್ಯಾಯ.

### ಹಿರೀ ಮದಕರಿನಾಯಕ (ಸಾಗುವುದು.)

ಮಾಯಕೊಂಡದ ಮುತ್ತಿಗೆ.

ಶಕ॥ ೧೬೨೦ ನೇ ವಿಭವ ಸಂ॥ ದಲ್ಲಿ ದೊರೆಯು ಮರಾಟೆ ಸಿದ್ಧೋಜಿರಾಯನನ್ನೂ ಕರೆದುಕೊಂಡು ದಂಡಿನೊಡನೆ ಅಣಜಿಬಳಿಯಲ್ಲಿ ಹೋಗಿ ಇಳಿದುಕೊಂಡನು. ಶತ್ರುಗಳ ಹಾವಳಿಯು ಆಕಡೆ ಬಲವಾದ್ದರಿಂದ ಹಾಗೆ ಹೋಗಬೇಕಾಯಿತು. ಅಷ್ಟರಲ್ಲಿ ನಗರದವರು, ಸವಣೂರವರು, ಹರಪನಹಳ್ಳಿಯವರು, ರಾಯದುರ್ಗದವರು, ಇವರೆಲ್ಲಾ ಪುನಃ ಸೇರಿಕೊಂಡು ಮಾಯಕೊಂಡಕ್ಕೆ ಮುತ್ತಿಗೆ ಹಾಕಿದಾರೆಂದು ವರ್ತಮಾನ ಬಂತು ಆಗ ದೊರೆಯು ಸೇನಾಸಮೇತನಾಗಿ ಹೊರಟು ವಿಭವ ಸಂ॥ ಫಾಲ್ಗುಣ ಶು॥ ೧೩ ಸ್ಥಿರವಾರದಲ್ಲು ಮಾಯಕೊಂಡದ ತೆವರಿನಮೇಲೆ ನಿಂತು ಶತ್ರುಸೇನೆಯನ್ನು ನೋಡಿ ಆನೆಯನ್ನೇರಿ ಸೊನ್ನೇ ಬಾಣಗಳನ್ನು ಹೊಡೆಯಿಸಿ ಸ್ವಾರಿ ಫಿರಂಗಿ ಹೊಡೆದು ಎದುರು ದಂಡಿನಮೇಲೆ ಬಿದ್ದು ಕಡಿಯಲಾಗಿ, ಹಗೆಗಳು ತಡೆಯಲಾರದೆ ನಾಲ್ಕು ಕಡೆಗೂ ಓಡಿಹೋದರು ಆಗ ರಾಜನು ಆನೇ ನಡಿಸಿಕೊಂಡು ಹೋಗಿ ಎದುರು ಸೇನೆಯ ಡೇರೇ ಬಳಿಯಲ್ಲಿ ನಿಂತನು. ಕಾಲುಬಲವು ಲೂಟಿಗೆ ಕೈ ಹಾಕಿದರು. ಆಗ ಹಗೆಯವರ ಕುದುರೇ ದಂಡು ಚಿತ್ರದುರ್ಗದ ಫೌಜಿನ ಮೇಲೆ ಬಿದ್ದು ಕಡಿಯಲು ಆರಂಭಿಸಿತು. ದುರ್ಗದ ಕಾಲು ಬಲವು ಮುರಿದು ಮಾಗಡಿಕೆರೆ ಹಿಂದಕ್ಕೆ ಹೋಯಿತು. ರಾಜನು ತನ್ನ ಫೌಜು ಮುರಿದುಹೋದ್ದನ್ನು ಕಂಡು ಆನೇಕಾಲಿಗೆ ದಬಕ ಹಾಕಿಸಿ ನಿಂತುಕೊಂಡು ಚಂದಾ ಸಾಬಿಯ ಕುದುರೆ ೨೦೦, ಕಾಲುಮಂದಿ ೨೦೦ ಇಷ್ಟು ಫೌಜು ಸಮೇತ ೬ ತಾಸಿನಿಂದ ೧೦ ತಾಸಿನವರೆಗೂ ಯುದ್ಧಮಾಡುತಿದ್ದನು. ಶತ್ರುಸೇನೆ ವಿಶಿಷ್ಟವೂ ಹಿರೀ ಮದಕರಿನಾಯಕನ ಆನೆಯೊಂದನ್ನು ಮುತ್ತಿ ಅದನ್ನು ಕಡಿದು ಕೆಡವಿದರು. ಆಗ ರಾಜನು ಖಾಸಾ

ದೊರೆಯ ಪರಾಕ್ರಮ.

ಮಾವುತ ಸಂಕನಿಗೆ ಅಪ್ಪಣೇ ಮಾಡಿ ಬೇರೆ ಆನೆಯನ್ನು ತರಿಸಿ ಅದನ್ನೇರಿಕೊಂಡು ಮಾವುತನನ್ನು ಕುರಿತು—ನಮ್ಮ ಆನೆಯನ್ನು ಹರಪನಹಳ್ಳಿದೊರೆಯ ಆನೆ ಬಳಿಗೆ ತೆಗೆ

ದುಕೊಂಡು ಹೋಗು, ಎಂದು ಅಪ್ಪಣೇ ಮಾಡಿದನು. ಅದಕ್ಕೆ ಮಾವುತನು—ಮಹಾಸ್ವಾಮಿ ನಮ್ಮ ಫೌಜು ನೂವತ್ತೂ ಮುರಿದು ಹೋಯಿತು. ಅವರ ಫೌಜು ನಾಲ್ಕು ಕಡೆಯಿಂದಲೂ ಹೊಡೆಯುತಾ ಬರುತಿದೆ, ನಮ್ಮ ಖಿಲ್ಲೆ ಹಿಂಭಾಗ ಹತ್ತರವಾಗಿದೆ. ಅಪ್ಪಣೆಯಾದರೆ ಮಾಯಕೊಂಡದ ಖಿಲ್ಲೆಯೊಳಕ್ಕೆ ಆನೆಯನ್ನು ತಿರುಗಿಸುತೇನೆ ಎಂದು ಅರಿಕೇ ಮಾಡಿದನು. ಈ ಮಾತು ಕೇಳಿ ದೊರೆಯು—ಈಶ್ವರನ ಕೃಪೆಯಿಂದ ನಾವು ಲಡಾಯಿಮಾಡಿದಾಗೆಲ್ಲಾ ಶತ್ರುಜನರಿಗೆ ಬೆನ್ನು ಕೊಟ್ಟಿಲ್ಲ, ಈ ವರೆಗೂ ಭಗವಂತನು ಯಶಸ್ಸು ಕೊಟ್ಟಿದಾನೆ. ಈ ದಿವಸ ಹರಪನ ಹಳ್ಳಿಯವರಿಗೆ ಬೆನ್ನು ಕೊಟ್ಟು ಎಷ್ಟುದಿವಸ ಬದುಕಬೇಕು ? ನಮಗೂ, ಹರಪನಹಳ್ಳಿಯವರಿಗೂ ಪರಸ್ಪರ ವಿಶೇಷವಾದ ಕ್ರೋಧವಿದೆ. ಒಬ್ಬರಮೇಲೆ ಒಬ್ಬರು ಮತ್ಸರ ತೀರಿಸಿಕೊಳ್ಳುವುದರಲ್ಲಿ ಅನೇಕ ಪ್ರಾಣಿಗಳು ಹತರಾಗುವರು. ಅಂಥಾ ಕ್ರೋಧವನ್ನು ಉಪಾಯಾಂತರದಿಂದ ಸಾಧಿಸಿಕೊಳ್ಳದೆ ನಾವು ಇಬ್ಬರೂ ಕಾದುವುದರಲ್ಲಿ ಇಷ್ಟು ಪ್ರಾಣಿಗಳನ್ನೂ ಬಲಿಕೊಡಬೇಕಾಗುವುದು. ಇದು ನಮಗೆ ಧರ್ಮವಲ್ಲ, ನಾವಿಬ್ಬರೂ ಪರಾಕ್ರಮದಿಂದ ಕಾಯುವಾಗ ಯಾರೂ ಸೋಲವಹಾಗಿಲ್ಲ. ಒಬ್ಬ ಮಡಿದರೆ ಅವನಿಗೆ ವೀರಸ್ವರ್ಗ ಬರುವುದು, ಅವನು ಗೆದ್ದಹಾಗಾಯಿತು. ಎದುರಾಳಿಗೆ ರಾಜ್ಯ ದೊರೆಯಿತು, ಅವನೂ ಗೆದ್ದಹಾಗಾಯಿತು ನಾವು ಈಶ್ವರ ಪೂಜೆಮಾಡಿದ್ದಕ್ಕೆ ಈ ದಿನ ವೀರಸ್ವರ್ಗವೇ ಪರಂತು ಎರಡನೇ ಮಾತೇ ಇಲ್ಲ. ಪರಾಕ್ರಮಶಾಲಿಗಳು ವೀರಸ್ವರ್ಗ ಭೋಗವನ್ನು ಅನುಭವಿಸುವರು, ಶತ್ರುಜನರು ತುಷ್ಟಿಯಾದರೆ ಅದೇ ಒಳ್ಳೆಯದು. ಇನ್ನುಮೇಲೆ ಸಾವಕಾಶಮಾಡದೆ ಆನೆಯನ್ನು ನಡಿಸಬೇಕು ನಿನಗೆ ಏನಾದರೂ ಭಯವಾದರೆ ಇಳಿದುಹೋಗಬಹುದು. ನಾನೇ ಮಾವುತನಾಗಿ ಲಡಾಯನ್ನೂ ಮಾಡಿಕೊಳ್ಳುತೇನೆಯೇ ಪರಂತು ಸರ್ವಾತ್ಮನ ಹಿಂತಿರುಗುವುದಿಲ್ಲ, ಎಂದು ಹೇಳಿದನು. ಇದಕ್ಕೆ ಮಾವುತನು—ಮಹಾರಾಜ ಛತ್ರಪತಿ, ತಾವು ಹೋದಮೇಲೆ, ನಾನು ಯಾರಿಗೆ ಮುಖಾತೋರಿಸಲಿ ? ತಮ್ಮ ಪಾದದ ಹತ್ತರ ನನ್ನಪ್ರಾಣ ಎಂದು ಖಚಿತವಾಗಿ ವಿಜ್ಞಾಪನೆ ಮಾಡಿ ದುರ್ಗದ ರಾಜನ ಆನೆಯನ್ನು ಹರಪನಹಳ್ಳಿಯ ಸೋಮಶೇಖರರಾಯರ ಆನೇಬಳಿಗೆ ನಡಿಸಿದನು. ಆ ದೊರೆಯು ಈ ಆನೆ ಬರುವುದನ್ನು

ನೋಡಿ ತನ್ನ ಹಸ್ತಿಯನ್ನು ಈ ಕಡೆಗೆ ನಡಿಸಿದನು. ಬೆಟ್ಟಕ್ಕೆ ಬೆಟ್ಟ ಎದುರಾದಂತೆ ಎರಡು ಆನೆಗಳೂ ಎದುರಾದವು. ಆಗ ಉಭಯರಾಯರೂ ಎದುರೆದುರಿಗೆ ನಿಂತು, ಝಾವದ ಪರ್ಯಂತ ಘೋರವಾಗಿ ಲಡಾಯಿ ಮಾಡಿದರು. ಮೊದಲು ತರಕಷ್ ಕಮಾರ್ಣ ಲಡಾಯಿ ಆಯಿತು. ತರುವಾಯ ಕೋವಿಗಳಿಂದ ಗೋಲಿವಗ್ಯೆರೆ ಹಾರಾಡಿದವು. ಇದೆಲ್ಲಾ ಬರಿದಾದ ಮೇಲೆ ಸೋಮಶೇಖರನಾಯಕನು ಹೊಸದಾಗಿ ಥಳಥಳಿಸುವ ಹಯೋಮುಖವೆಂಬ ಹೊಸ ಭರ್ಜಿಯನ್ನು ತೆಗೆದುಕೊಂಡು ಆನೇಮೇಲಿನಿಂದ ಬಗ್ಗಿ ಮಸ್ತಕದಮೇಲೆ ಕಾಲಿಟ್ಟು ಹಿರೀ ಮದಕರಿನಾಯಕನನ್ನು ತಿವಿದನು. ಆಗ ಚಿತ್ರದುರ್ಗದ ಭೂಪನು ಆ ಬಹಲೆಯನ್ನು ಕಿತ್ತುಕೊಳ್ಳಬೇಕೆಂದು ಬಗ್ಗಿ ತನ್ನ ಆನೆಯ ಮಸ್ತಕದಮೇಲೆ ಕಾಲಿಟ್ಟು ನಿಂತು, ಆ ಭರ್ಜಿಗೆ ಕೈಹಾಕಿ ಹಿಡಿದುಕೊಳ್ಳಲು, ಸೋಮಶೇಖರರಾಯನು ಅದನ್ನು ಹಿರಿದುಕೊಳ್ಳುವುದಕ್ಕೆ ಯತ್ನಮಾಡಿ ವಿಶೇಷವಾಗಿ ತಿನಕಾಡಿದನು. ಮದಕರಿನಾಯಕನ ಕೈಗಾಯವಾಯಿತೇ ಹೊರತು ಭರ್ಜಿಯ ಅಲಗನ್ನು ಆ ಶೂರನು ಬಿಡದೆ ಹಿರಿದುಕೊಂಡನು. ಉಭಯ ಕಕ್ಷಿಯ ಮಾವುತರೂ ಸತ್ತು ಬಿದ್ದರು. ಉಭಯರಾಯರಿಗೂ ಗಾಯ ಬಹಳವಾಯಿತು. ಸೋಮಶೇಖರರಾಯನು ಮೂರ್ಛೆ ಬಂದು ಮಲಗಿದನು. ಮದಕರಿನಾಯಕನಿಗೆ ಭಾರಿಯಾಗಿ ಗಾಯವಾದ್ದರಿಂದ ಅವನು ಸೂರ್ಯಮಂಡಲವನ್ನು ಭೇದಿಸಿಕೊಂಡು ವೀರಸ್ವರ್ಗಕ್ಕೆ ಹೋದನು. ಚಿತ್ರದುರ್ಗದ ಆನೆ ೪, ಫಿರಂಗಿ ೨, ದೊರೆಯ ಬಳಿಯಲ್ಲಿದ್ದ ಬಹಲೆ ೧, ಗುರುದಾಕತ್ತಿ ೧, ಇನ್ನೂ ಕೆಲವು ಸಾಮಾನುಗಳು ಇವೆಲ್ಲವೂ ಹರಪನಹಳ್ಳಿಯವರ ವಶವಾಯಿತು.

ದೊರೆಗಳಿಬ್ಬರಿಗೂ ಕೈಕೈಸೇರಿ ಸಮಯುದ್ಧ.

ಹಿರೀ ಮದಕರಿನಾಯಕನಿಗೆ ವೀರಸ್ವರ್ಗವಾದ್ದು.

ನೀರತಡಿ ಬಳಿಯಲ್ಲಿ ಇಳಿದುಕೊಂಡಿದ್ದ ನಾಗತಿಯರು, ಕುಮಾರಿತಿಯರು, ಕುಮಾರರು ಮುಂತಾದ ಸಕಲಗುನುಗು ಸಹಾ ದುರ್ಗಕ್ಕೆ ಬಂದರು. ಮಾಯಕೊಂಡದ ಬಳಿಯಲ್ಲಿ ದೊರೆಯ ದೇಹವನ್ನು ದಹನ ಮಾಡಿ ಅಸ್ಥಿಯನ್ನು ತಂದು ರಾಜ ಭರಮಪ್ಪನಾಯಕನ ಸಮಾಧಿ ಬಳಿ

ಯಲ್ಲಿ ಸ್ಥಾಪನೆ ಮಾಡಿದರು. ಇಷ್ಟಾದರೂ ಮಾಯಕೊಂಡದ ಕೋಟೆ ಯೇನೋ ಶತ್ರುಗಳವಶವಾಗಲಿಲ್ಲ.

ದೊರೆತನದ ಆಡಳತ.

ಈ ದೊರೆಯ ಆಳಿಕೆಯಲ್ಲಿ ಒಟ್ಟು ಸೀಮೆ ೧೮ ಕ್ಕೆ ೬೧ ಪಟ್ಟಿಡಿಗೆ ಮಾರ್ಗ ಸುಂಕ, ಸ್ಥಳ ಸುಂಕ, ಹುಲ್ಲು ಬನ್ನಿ, ಇಟ್ಟಿಗೆ ಗುತ್ತಿಗೆ, ಎಲೆಮನೆ, ತಂಬಾಕು, ಗಾಂಜ, ಷರಾಬು, ಉಪ್ಪಿನ ಮೋಳೆ, ಆಚಾರಗಾಣಿಕೆ, ಸಹಾ ಸೇರಿ ಹುಟ್ಟುವಳಿ ೩೦೦೦೦೦ ವರಹ.

ಈ ದೊರೆಯು ಆಳಿಕೆಯಲ್ಲಿ ೮ ದೇವಸ್ಥಾನಗಳು, ಕಾತರ ಹಾಳು ಕೆರೆಯು ಅರೆಗೆಲಸದ ಕಟ್ಟೆ, ನೊದಲಾದ್ದನ್ನು ಮಾಡಿಸಿದರು.

ದೊರೆಯು ಆಚಾರಶೀಲತೆ ದೈವಭಕ್ತಿ.

ಈ ಹಿರೀ ಮದಕರಿನಾಯಕನು ವಿಶೇಷವಾಗಿ ದೈವಭಕ್ತಿಯುಳ್ಳವನು. ರಾಕ್ಷಸ ಸಂ॥ ದಲ್ಲಿ ಚಂದ್ರಮೌಳೇಶ್ವರನೆಂಬ ಸ್ಫಟಿಕದ ಲಿಂಗವನ್ನು ಮಾಡಿಸಿದ್ದರು. ಗುರುಮುಖೇನ ಮಂತ್ರೋಪದೇಶವನ್ನು ಮಾಡಿಸಿಕೊಂಡು ಅಡಿಗೆ ಪರಿಚಾರಿಕೆಯನ್ನು ಬ್ರಾಹ್ಮಣರಿಂದಲೇ ಮಾಡಿಸುತಾ ಬ್ರಾಹ್ಮಣರ ಸಂಗಡ ದೊರೆಯು ರುದ್ರಾಭಿಷೇಕವನ್ನು ಮಾಡಿ ಸಹಸ್ರನಾಮಾರ್ಚನೆಯನ್ನು ಮಾಡಿ ಧೂಪದೀಪ ನೈವೇದ್ಯಾದಿಗಳು ಆದನಂತರ ಊಟಾಮಾಡುತಿದ್ದನು. ಪ್ರತಿ ಸೋಮವಾರವೂ ನಕ್ತಭೋಜನ, ಪಕ್ಷಪ್ರದೋಷ, ಶ್ರಾವಣಮಾಸ ೧ ತಿಂಗಳು, ಕಾರ್ತಿಕಮಾಸ ೧ ತಿಂಗಳು, ಶನಿಪ್ರದೋಷ, ನವರಾತ್ರಿ ೯ ದಿವಸ, ಉಚ್ಚಂಗಮ್ಮನ ರಥೋತ್ಸವದಲ್ಲಿ ಕಂಕಣಕಟ್ಟಿದ ದಿವಸ ಮೊದಲುಮಾಡಿಕೊಂಡು ಮಹೋತ್ಸವವಾಗುವವರೆಗೂ, ಭಾರತದ ಹುಣ್ಣಿಮೆ ೯ ದಿವಸ, ನವರಾತ್ರಿ ಸಹಾ ನಕ್ತಭೋಜನ. ಮಾಸ ಶಿವರಾತ್ರಿ ಉಪವಾಸ, ಬೆಳಗಾಗಿ ಸಮಾರಾಧನೆ, ಈ ಪ್ರಕಾರ ನಡಿಸುತಿದ್ದನು. ಈ ದಿವಸಗಳಲ್ಲಿ ಜಾತ್ಯಾಹಾರಮಾಡುತಿರಲಿಲ್ಲ. ತಂದೆ ತಾಯಿಗಳ ಕಾಲಶ್ರಾದ್ಧಮಾಡೋಣ, ಮಾಸ ಶಿವರಾತ್ರಿ ದಿವಸ ಒಂದು ತಿಂಗಳಿಗೆ ಒಂದು ಬಾರಿ ಪೌರ್ಣಮಿ ದಿವಸ ತಿಂಗಳಿಗೆ ಒಂದು ಬಾರಿ ಉಚ್ಚಂಗಮ್ಮನಿಗೆ ಉತ್ಸವ, ವರುಷಕ್ಕೆ ಒಂದು ಬಾರಿ ಸಿಡಿ, ಈ ಪ್ರಕಾರ ನಡೆಯುವಂತೆ ಏರ್ಪಾಡು ಮಾಡಿಸಿದ್ದನು.

---

## ೧೫ ನೇ ಅಧ್ಯಾಯ.

## ಇಮ್ಮಡಿ ಕಸ್ತೂರಿ ರಂಗಪ್ಪನಾಯಕ.

ಶ|| ೧೬೩೦ ನೇ ವಿಭವ ಸಂ||

ಇಮ್ಮಡಿ ಕಸ್ತೂರಿ ರಂಗಪ್ಪನಾಯಕನಿಗೆ ಪಟ್ಟ.

ಹಿರೀ ಮದಕರಿನಾಯಕನ ಜ್ಯೇಷ್ಠ ಪುತ್ರನಾದ ಕಸ್ತೂರಿ ರಂಗಪ್ಪನಾಯಕನಿಗೆ ಶ|| ೧೬೩೦ ನೇ ವಿಭವ ಸಂ|| ಫಾಲ್ಗುಣ ಬ|| ೨ ಗುರುವಾರದಲ್ಲು ಸಂಪಿಗೆ ಸಿದ್ಧೇಶ್ವರನ ಗುಡಿಯಲ್ಲಿ ಪಟ್ಟವಾಯಿತು.

ಮಾಯಿಕೊಂಡದ ಮುತ್ತಿಗೆ ಎಬ್ಬಿಸಿದ್ದು.

ಈ ದೊರೆಯು ಪಟ್ಟಕ್ಕೆ ಬಂದಮೇಲೆ ಯಾತರ ದೆಸೆಯಿಂದ ತನ್ನ ತಂದೆಯು ಮೃತನಾದನೋ ಅಂಥಾ ಮಾಯಿಕೊಂಡದ ಮುತ್ತಿಗೆಯನ್ನು ಎಬ್ಬಿಸುವುದು ತನ್ನ ಮೊದಲನೇ ಕೆಲಸವೆಂದು ಯೋಚಿಸಿ, ಗುತ್ತೀ ಮುರಾರಿರಾಯ, ಆದವಾನಿ ಸುಬೇದಾರ ಹಿದಾಯತ್ತು ಮೋತೀಖಾನ, ಮೊದಲಾದವರನ್ನು ಕರೆಯಿಸಿಕೊಂಡು, ಒಂದು ಲಕ್ಷ ವರಹಾ ಕೊಟ್ಟು ಮಾಯಿಕೊಂಡದ ಮುತ್ತಿಗೆಯನ್ನು ಎಬ್ಬಿಸಲು ಗೊತ್ತುಮಾಡಿದನು. ಶುಕ್ಲ ಸಂ|| ಚೈತ್ರ ಶು|| ೧ ದಿವಸ ಗುರುವಾರರಾತ್ರಿ ೮ ಗಳಿಗೆಯಮೇಲೆ ಬಿದನೂರವರ ದಂಡು, ಹರಪನಹಳ್ಳಿಯವರ ದಂಡೂ, ಕಡಮೆ ಪಾಳೆಯಗಾರರೂ ಸಹಾ ಮಾಯಿಕೊಂಡದ ಮುತ್ತಿಗೆ ಬಿಟ್ಟು ಓಡಿದರು.

ಮುರಾರಿರಾಯ, ಆದವಾನಿ ಸುಬೇದಾರ ದ್ರೋಹಿಗಳಾದ್ದು.

ತರುವಾಯ ಅಲ್ಲಿನ ದಂಡೆಲ್ಲವನ್ನೂ ತೆಗೆದುಕೊಂಡು ಸಂತೇ ಬೆನ್ನೂರಿಗೆ ಬಂದು ಆ ಶತೃಗಳೆಲ್ಲಾ ಅಲ್ಲಿ ಮುತ್ತಿಗೇ ಹಾಕಲು, ಮುರಾರಿರಾಯ, ಆದವಾನಿ ಸುಬೇದಾರ ಸಹಾ ಶತ್ರುಗಳ ಲಂಚಕ್ಕೆ ಆಶೆಬಿದ್ದು ಅವರ ಕಡೆಗೆ ತಿರುಗಿಕೊಂಡ ಕಾರಣ, ಅವರ ಸಹವಾಸವನ್ನು ಬಿಟ್ಟು ಕಸ್ತೂರಿ ರಂಗಪ್ಪನಾಯಕನು ತನ್ನ ದಂಡಿನೊಡನೆ ದುರ್ಗಕ್ಕೆ ಬಂದನು. ಆದರೂ ನಾಚಿಕೆಇಲ್ಲದೆ ಮುರಾರಿ ರಾಯನು ದುರ್ಗಕ್ಕೆಬಂದು ರಾಜರ ಭೇಟಿಮಾಡಿಕೊಂಡು ಹೊರಟುಹೋದನು. ಆನೆಗೊಂದಿಯವರಿಗೂ, ದುರ್ಗದವರಿಗೂ ಚಿಲ್ಲರೆ ಕದನ ನಡೆಯಿತು. ಇದೇ ಶುಕ್ಲ ಸಂ|| ದ ಕಾರ್ತೀಕ ಮಾ

ಸದಲ್ಲಿ ಬುಕ್ಕಸಾಗರ ಮೊದಲಾದ ಗಡಿಗಳನ್ನು ದುರ್ಗದ ರಾಜನು ಜಯಿಸಿ ಕೊಂಡನು.

ಇದೇ ಶುಕ್ಲ ಸಂ॥ ದಲ್ಲಿ ದುರ್ಗದ ಅರಮನೇ ಬೊಕ್ಕಸಕ್ಕೆ ಯಾರೋ ಕನ್ನಹಾಕಿದ್ದರು. ಇತರ ಕಾಟಕಾಯಗಳು ಶತ್ರುಗಳ ದೆಸೆಯಿಂದ ಚಿಲ್ಲರೆ ಚಿಲ್ಲರೆಯಾಗಿ ಜರಗುತ್ತಲೇ ಇದ್ದವು. ಪ್ರಜೋತ್ಪತ್ತಿ ಸಂ॥ ದಲ್ಲಿ “ಶ್ರೀಮರ್ತ ಮಹಾನಾಯಕಾಚಾರ್ಯ ಕಾಮಗೇತಿ ಕಸ್ತೂರಿ ರಂಗಪ್ಪ ರಾಜ ಮದಕರಿನಾಯಕರವರ ಕಸ್ತೂರಿ ರಂಗಪ್ಪನಾಯಕರಿಂದ” ಎಂದು ಇತರ ಪಾಳಯಗಾರರಿಗೆ ಪತ್ರಗಳನ್ನು ಬಕ್ಕಣಿಸುತಾ ಬಂದರು. ಅಂಗೀರಸ ಸಂ॥ ದಲ್ಲಿ ನಾನಾಜಿರಾಯನ ದಂಡು ಬಂದು ಅವಾಂತರ ಮಾಡಿ ಸ್ವಲ್ಪ ಹಣವನ್ನು ತೆಗೆದುಕೊಂಡು ಹೊರಟುಹೋಯಿತು. ಇದೇ ನಾನಾಜಿರಾಯನು ಪುನಃ ಶ್ರೀಮುಖ ಸಂ॥ ದಲ್ಲಿ ಬಂದು ಅಣಜೀಕೋಟೆಯನ್ನು ಮುತ್ತಿ ಹಣವನ್ನು ತೆಗೆದುಕೊಂಡು ಹೋದನು. ಭಾವ ಸಂ॥ ದ ಆಷಾಢ ಶು॥ ೨ ಸ್ಥಿರವಾರದಲ್ಲಿ ಕಸ್ತೂರಿ ರಂಗಪ್ಪನು ಮೃತಪಟ್ಟನು.

ಈ ದೊರೆಗೆ ಮಕ್ಕಳಿಲ್ಲ ಈತನು ದುರ್ಗದಮೇಲೆ ಕೆಲವು ಕಣಜ, ಬಂದು ಬಂಣದ ಚಾವಡಿ ಸಹಾ ಮಾಡಿಸಿದನು.

---

## ೧೬ ನೇ ಅಧ್ಯಾಯ.

## ಕಡೇ ಮದಕರಿನಾಯಕ.

ಶ॥ ೧೬೭೬ ನೇ ಭಾವ ಸಂ॥

ಕಸ್ತೂರಿ ರಂಗಪ್ಪನಾಯಕನಿಗೆ ಸಂತಾನವಿಲ್ಲವಾದ್ದರಿಂದ ಯಾರಿಗೆ ಪಟ್ಟಾಭಿಷೇಕಮಾಡಬೇಕು, ಎಂಬ ವಿಷಯದಲ್ಲಿ ಚರ್ಚೆಬಂತು. ಕಸ್ತೂರಿರಂಗಪ್ಪನಾಯಕನ ತಾಯಿ ಓಬಳವ್ಮನಾಗತಿ, ಮುರಗಿಸ್ವಾಮಿಗಳು, ಸಕಲ ದಳವಾಯಿಗಳು, ಪ್ರಧಾನಿಗಳು, ಬಲನಾಯಕರು, ಗುರಿಕಾರರು, ರಾಹುತ ರಾಣ್ಯಾದಸೇರು ವೇಗಾರರು, ಸಾಮಾಜಿಕರು, ಪೇಟೆಸೆಟ್ಟಿ, ಪಟ್ಟಣಸೆಟ್ಟಿ ಮುಂತಾದ ಪ್ರಮುಖವರ್ತಕರು ಸಹಾ ಸಭೆಸೇರಿ ಆಲೋಚನೆ

ದೊರೆಯನ್ನು ಚುನಾಯಿಸಲು ಸಭೆ ಸೇರಿದ್ದು.

ಮಾಡಿ, ಜಾನಕಲ್ಲು ಹೊಸದುರ್ಗದ ಸೇನಾಪತಿಯಾಗಿಯೂ ಹಿರೀ ಮದಕರಿನಾಯಕನ ತಮ್ಮನಾಗಿಯೂ ಇದ್ದ ದಂಡಿನ ಜಂಪಂಣನಾಯಕನ ಕುಮಾರ ಭರಮಪ್ಪನಾಯಕನಿಗೆ ಪಟ್ಟಾಭಿಷೇಕವಮಾಡಬೇಕೆಂಬದಾಗಿ ನಿಶ್ಚೈಸಿದರು. ಆದಿನರಾತ್ರಿ ಓಬಳಮ್ಮನಾಗತಿಯು ಸ್ವಪ್ನದಲ್ಲಿ ಹಿರಿ ಮದಕರಿನಾಯಕನು ಬಂದು "ನಾನು ಈ ಭೂಮಿಯಮೇಲೆ ಜಾನಕಲ್ಲು ದುರ್ಗದ ತೊದಲು ಭರಮಂಣನಾಯಕನ ಹೊಟ್ಟೆಯಲ್ಲಿ ಮದಕರಿನಾಯಕನೆಂಬ ನಾಮಧೇಯದಿಂದ ಅವತರಿಸಿದೇನೆ, ಈತನಿಗೇ ಪಟ್ಟಾಭಿಷೇಕವಾಗಬೇಕು" ಎಂದು ಹೇಳಿದನಂತೆ. ಮಾರನೇ ದಿನ ಪ್ರಾತಃಕಾಲಕ್ಕೆ ಓಬಳಮ್ಮನಾಗತಿಯು ಎದ್ದು ಸಭೆಮಾಡಿಸಿ ಸ್ವಜನರನ್ನು ಕರೆಕಳುಹಿಸಿ ತನಗೆ ಮುನ್ನಾದಿನ ಆದ ಸ್ವಪ್ನದ ಸಂಗತಿಯನ್ನು ಹೇಳಿದಳು. ಸರ್‍ವರೂ ಸಂತೋಷಪಟ್ಟು ಆನೆಯಮೇಲೆ ಅಂಬಾರಿಹಾಕಿಸಿ ಜಾನಕಲ್ಲು ದುರ್ಗಕ್ಕೆ ಬಂದು ತೊದಲು ಭರಮಂಣನಾಯಕನಿಗೆ ಮಗನಾದ ಮದಕರಿನಾಯಕನನ್ನು ಅಂಬಾರಿಯಲ್ಲಿ ಕೂರಿಸಿಕೊಂಡು ಉತ್ಸವದಿಂದ ದುರ್ಗಕ್ಕೆ ಕರೆದುಕೊಂಡು ಬಂದು ಓಬಳಮ್ಮನಾಗತಿಯವರಿಗೆ ಒಪ್ಪಿಸಿದರು. ಶ॥ ೧೬೭೬ ನೇ ಭಾವ ಸಂ॥ ಆಷಾಢ ಶುದ್ಧ ೧೦ ಯಲ್ಲು ಈ ಮದಕರಿನಾಯಕನಿಗೆ ಚಂಪಕಾ ಸಿದ್ಧೇಶ್ವರನ ಗುಡಿಯಲ್ಲಿ ಪಟ್ಟಾಭಿಷೇಕವಾಯಿತು. ಆಗ ಈ ಚಿಕ್ಕ ದೊರೆಗೆ ೧೦ ವರುಷ ವಯಸ್ಸಾಗಿತ್ತು. ಈತನನ್ನು ರಾಜ ಕಸ್ತೂರಿ ರಂಗಪ್ಪನಾಯಕರಿಗಿಂತ ಹೆಚ್ಚೆಂದು ಭಾವಿಸಬೇಕೆಂತಲೂ, ರಾಜ್ಯದ ಸರ್‍ವಾಧಿಕಾರವನ್ನೂ ಓಬಳಮ್ಮನಾಗತಿಯು ವಹಿಸಬೇಕೆಂತಲೂ, ದಳವಾಯಿ ಚಿಕ್ಕಂಣನ ಮಗ ದಳವಾಯಿ ಭರಮಪ್ಪನೂ, ಬಲನಾಯಕರೂ, ಕಂದನಕೋವಿ ಬೊಮ್ಮಂಣ, ಏಕಾಸಿ ಕಾಟಪ್ಪನಾಯಕರ ಭರಮಂಣ. ಮುಂತಾದವರು ಅರಿಕೇಮಾಡಿದರು. ಆ ಪ್ರಕಾರ ಓಬಳಮ್ಮನಾಗತಿಯು ಅಧಿಕಾರವನ್ನು ವಹಿಸಿ ರಾಜ್ಯಭಾರ ಮಾಡುತಿದ್ದಳು. ಆಗ ರಾಯದುರ್ಗದ ಸಂಸ್ಥಾನೀಕರು ಚಿತ್ರದುರ್ಗದವರ ಪ್ರಾಬಲ್ಯವನ್ನು ನೋಡಿ ಸಹಿಸಲಾರದೆ, ಈ ಸೀಮೆಯಮೇಲೆ ಬೀಳಲು ಸಮಯವನ್ನು ಕಾಯುತಾ ಇದ್ದರು. ರಾಯದುರ್ಗದ

ಓಬಳಮ್ಮ ನಾಗತಿಯ ಸ್ವಪ್ನ.

ಕಡೇ ಮದಕರಿನಾಯಕನಿಗೆ ಪಟ್ಟವಾದ್ದು.

ರಾಯದುರ್ಗ, ಹರಪನಹಳ್ಳಿ ರಾಜರೊಡನೆ ಯುದ್ಧ.

ಪಾಳಯಗಾರರು—ಚಿತ್ರದರ್ಗದಲ್ಲಿ ದೊಡ್ಡವರು ಬಿದ್ದು ಹೋದರು, ಸಣ್ಣ ಹುಡುಗನಿಗೆ ಪಟ್ಟಾಕಟ್ಟಿದಾರೆ, ಸೀಮೆಯ ಆಡಳತವನ್ನು ಒಬ್ಬ ಮುದುಕಿ ನಡಿಸುತಿದಾಳೆ, ಇವರಿಂದ ಏನಾದೀತು? ಎಂದು ಹರಪನಹಳ್ಳೀ ಸಂಸ್ಥಾನದವರ ಸಹಾಯವನ್ನು ಪಡೆದು ದಂಡು ತೆಗೆದುಕೊಂಡು ಬಂದು ಚಿತ್ರದುರ್ಗದ ಸೀಮೆಯಲ್ಲಿ ಮೆಯ್ಯುತಿದ್ದ ಆ ರಾಜ್ಯದವರ ದನಗಳನ್ನು ತಿರುಗಿಸಿಕೊಂಡು ಹೋದರು. ಈ ವರ್ತಮಾನವನ್ನು ಕೇಳಿ ದುರ್ಗದ ಸಂಸ್ಥಾನದವರು ಸೇನೆಯೊಡನೆ ಹೋಗಿ ಸರಹದ್ದಿನಲ್ಲಿ ಇಳಿದುಕೊಂಡರು. ಶತ್ರುಗಳ ಕಡೆ ೧೦೦೦೦ ಕಾಲುಬಲ, ೨೦೦೦ ಕುದುರೆ, ೧೦ ಫಿರಂಗಿ ಸಮೇತ ಅವರ ಸೀಮೆಯಲ್ಲಿ ಎರಡುಕೆರೆ ಸೀಮೆಗೆ ಬಂದು ಇಳಿಯಿತು. ದುರ್ಗದವರ ದಂಡು ಓಬಳಾಪುರದ ಕೋಟೆಗೆ ಬಂದು ಇಳಿಯಿತು. ಹಗೆಗಳು ತಮ್ಮ ಸೇನೆಯನ್ನು ನಾಲ್ಕು ತುಕಡಿ ಮಾಡಿ ನಿಲ್ಲಿಸಿದರು. ಎದುರಾಳಿಗಳಂತೆಯೇ ನಾಲ್ಕು ಭಾಗವಾಗಿ ದುರ್ಗದ ಭಟರೂ ನಿಂತರು. ಯುದ್ಧವು ಬೆಳಗ್ಗೆ ಆರಂಭವಾಗಿ ನಾಲ್ಕು ಗಳಿಗೆ ನಡೆಯಿತ. ಜಗಳದಲ್ಲಿ ಶತ್ರುಸೇನೆಯು ವಿಶೇಷವಾಗಿ ಹತವಾಯಿತು. ಆಗ ರಾಜರು ಎರಡುಕೆರೆ ಗ್ರಾಮಕ್ಕೆ ಸೇನೆಯೊಡನೆ ಹೋಗಿ ಠಾಣ್ಯಾ ಹಾಕಿ ಕೋನಾಪುರ, ಕೊಡಗನೂರು, ಇವುಗಳನ್ನು ತೆಗೆದುಕೊಂಡು ರಾಯದುರ್ಗದ ಪೇಟೆಗೆ ಹೊಕ್ಕು ಕೋಟೆಗೆ ಮೊಹರ್ಚೆ ಹಾಕುತಿದ್ದರು. ಆಗ ಬಸಲತ್ತುಜಂಗನು, ಕರ್ಣಾಟಕ ದೇಶದಿಂದ ಖಂಡಣಿ ಹಣ ತೆಗೆದುಕೊಂಡು ಹೋಗಲು ಬಂದನು. ದುರ್ಗದವರು—ಎರಡುಕಡೆ ಲಡಾಯಿ ಬೀಳುವುದು, ನಿರ್ವಹಿಸುವುದು ಕಷ್ಟ, ಬಂದದ್ದಕ್ಕೆ ರಾಯದುರ್ಗದವರ ಮೇಲೆ ಜಯವಾಯಿತು, ಭಾರಿಕೋಟೆ, ಖಿಲ್ಲೆ ಬಿಟ್ಟು ಇರುವುದಕ್ಕಾಗುವುದಿಲ್ಲ, ಎಂದು ರಾಯದುರ್ಗವನ್ನು ತೆಗೆದುಕೊಂಡು ಚಿತ್ರದುರ್ಗಕ್ಕೆ ಬಂದರು.

ಚಿತ್ರದುರ್ಗದ ಜಯ.

ಧಾತು ಸಂ॥ ಜ್ಯೇಷ್ಠ ಶು॥ ೩ ಯಲ್ಲು ಓಬಳವ್ಮ ನಾಗತಿಯು ತೀರಿಹೋದಳು. ಈಶ್ವರ ಸಂ॥ ದಲ್ಲಿ ಹುಚ್ಚಂಗವ್ಮನ ಹೊಂಡದ ಅಗಳನ್ನು ತೆಗೆಯಲು ಆರಂಭಿಸಿದರು.

ಓಬವ್ವನಾಗತಿ ತೀರಿ ಹೋದ್ದು.

ವಿಕ್ರಮ ಸಂ॥ ದಲ್ಲಿ ಹರಪನ ಹಳ್ಳಿಯವರು ತೊಯಿಲ ಹಳ್ಳಿಗೆ ಬಂದು ಮುತ್ತಿಕೊಂಡು ಬಂದು ತಿಂಗಳಿಂದಲೂ ಸಾಧಿಸುತಾ ಇದಾರೆಂಬ ವರ್ತಮಾನವನ್ನು ರಾಜನು ಕೇಳಿ ದುರ್ಗದಿಂದ ದಂಡಿನೊಡನೆ ಹೋಗಿ ಕಣಕುಪ್ಪೆಬಳಿ ಮೈದಾನದಲ್ಲಿ ಇಳಿದುಕೊಂಡು, ಶತ್ರುಗಳ ದಂಡಿನ ಅಂದಾಜನ್ನು ತಿಳಿದುಕೊಳ್ಳುವ ಬಗ್ಗೆ ಗುಪ್ತಚಾರರನ್ನು ಕಳುಹಿಸಿದನು. ಆಚಾರರು ಹೋಗಿ ನೋಡಿಕೊಂಡು ಬಂದು—ಸವಣೂರ ಹಾಕಿಂಖಾನ, ರಾಯದುರ್ಗದವರು, ನಗರದವರು, ಹರಪನಹಳ್ಳಿಯವರು, ಸಹಾಸೇರಿ ೨೦೦೦೦ ಫೌಜು, ೨೦ ತೋಫು, ೪೦೦೦ ಕುದುರೆ, ಬಾಣ ವಗೈರೆ ಭಾರಿ ಸರಂಜಾಂನಿಸಿ ಬಂದು ಇಳಿದಿದಾರೆ ಎಂದು ರಾಜರಿಗೆ ತಿಳಿಸಿದರು. ಆಗ ರಾಜರು ತಮ್ಮಫೌಜು ಮುತ್ತು ಸೇನಾನಾಯಕರು ಇವರೊಡನೆ ಆಲೋಚನೆ ಮಾಡಿದರು. ಆಕಾಲದಲ್ಲಿ ಮನಸಬದಾರ ನೀಲಕಂಠರಾಯನು ದೊರೆಯನ್ನು ಕುರಿತು—"ಶತ್ರುಜನ ಪ್ರಬಲವಾಗಿ ಭಾರಿಜಮಾಯತ್ತು "ನಿಸಿ ಇಳಿದು ಇದಾರೆ, ನಾವು ಸಾವಕಾಶಮಾಡಿದರೆ ಸಾಧಾರಣವಾಗಿ "ಬಲವಾಗಿಲ್ಲದೆ ಇರುವ ಈ ಕೋಟೆಗೆ ಠಾಣೆ ಬೀಳುತ್ತೆ, ತರುವಾಯ "ನಾವು ಹೋದರೂ ವ್ಯರ್ಥವಾಗುವುದು, ಆದ್ದರಿಂದ ದಂಡನ್ನು "ಕೂಚು ಮಾಡಿ ಅವರ ರೂಬರು ಇಳಿದು ಲಡಾಯಿ ಕೊಡಬೇಕು," ಎಂದು ಹೇಳಿದನು. ಇದು ವಿಹಿತವೆಂದು ತಿಳಿದು ಚಿತ್ರದುರ್ಗದವರು ಕೂಚು ನಗಾರಿಗೆ ಹುಕುಂ ಮಾಡಿದರು. ದಳೋಬಸ್ತುಫೌಜು ಹೊರಟು ಹೊಸಕೆರೆ ಬಳಿ ನಿಂತಿತು. ಈ ವರ್ತಮಾನವನ್ನು ಹರಪನಹಳ್ಳಿಯವರು ಕೇಳಿ ತಮ್ಮ ದಂಡು ಎಲ್ಲವನ್ನೂ ಸೇರಿಸಿ ಮೈದಾನಕ್ಕೆ ಬಂದು ನಿಂತರು. ಇವರಿಗೆ ದುರ್ಗದ ಸೇನೆ ಎದುರಾಯಿತು. ಮದಕರಿನಾಯಕನು ನಾಲ್ಕು ತುಕಡಿ ಮಾಡಿ, ಬಂದು ತುಕಡಿಯನ್ನು ಪೂರ್ವಕ್ಕೆ ನಿಲ್ಲಿಸಿದನು. ಇನ್ನೊಂದು ತುಕಡಿಯನ್ನು ಗುನುಗು ವಗೈರೆ ಕಾವಲಿಗೆ ನಿಲ್ಲಿಸಿದನು. ಬಂದು ತುಕಡಿ ಖಾಸಾ ಫೌಜು ಹಜರತ್ತು ಮುಕ್ಕಂಣ ಸುತ್ತು, ಪಂಚಕಸೆ ಭಲ್ಲೆದವರು, ಎಡಭರ್ಜಿ ಬಲಭರ್ಜಿಜನ, ಖಾಸಾ ತಬೇಲಿಜನ, ತೋಫ್ ಮತ್ತು ಬಂದೂಕ್‌ದಾರರು, ಖಾಸಾಬಿರಾದರಿ, ಮತ್ತು ಪೂರಭಯ್ಯಾಜನರು

ಹರಪನ ಹಳ್ಳಿಯವರೊಡನೆ ಯುದ್ಧ

ಹೊಸಕೆರೆ ಯುದ್ಧ

ಮತ್ತು ಬಾರೂತ್ ಜನಗಳು, ಎಂದರೆ ಖುತ್‌ಬಂದೀಖಾನ್, ಸಲಾಬತ್ತುಖಾನ್, ಇಮಾಂಖಾನ್ ಬಕ್ಷಿ, ಮತ್ತು ಸುಭಾನರಾವ್ ಘೋರ್ಪಡೆ, ತಮ್ಮಾಜಿ ಮಾಧವ ವಗೈರೆ ದೊಡ್ಡದೊಡ್ಡ ಸರದಾರರು, ಮತ್ತು ಎಕ್ಕಂಡೆಸಿಪಾಯಿ, ಜಿರಾಯಿತುಜನ, ಖಾಸಾಬಾರು, ಕಂದಾಚಾರ ವಗೈರೆ ಜನರಿಗೆ ಸೇರಿಸಿಕೊಂಡು ನಿಂತರು. ನಾಲ್ಕು ಕಡೆಯಿಂದ ಗೋಲಿ ಷುರು ವಾಯಿತು. ಒಂದು ಸಾವಿರ ಬಾಣಕ್ಕೆ ಬತ್ತಿಕೊಟ್ಟರು. ಮತ್ತು ರೈಫಲ್, ಜಂಜಾಲು, ಷುತಾರ್‌ನಲ್, ಹತ್ಯಾರದಲ್, ಬಂದೂಖ್ ವಗೈರೆ ಸಲಾಖಿ ಒಂದೇ ಆವರ್ತಿ ಆಯಿತು.

ಇದರ ಜೊತೆಗೆ ಕೇಕೆ ಸದ್ದೂ ಸೇರಿಕೊಂಡದ್ದರಿಂದ ಒಬ್ಬರ ಮಾತು ಒಬ್ಬರಿಗೆ ಕೇಳಲಿಲ್ಲ. ವಿಶೇಷವಾಗಿ ಧೂಳು ಎದ್ದು ಒಬ್ಬರ ಮುಖ ಒಬ್ಬರಿಗೆ ಕಾಣಲಿಲ್ಲ. ಈ ಮೇರೆಗೆ ನಾಲ್ಕು ತಾಸು ಪರ್ಯಂತ ಲಡಾಯಿ ಆಗುತ್ತಿರುವಾಗ್ಗೆ ಯಾವಕಡೇ ದಂಡೂ ತಿರುಗಲಿಲ್ಲ.

ಹಿಂದಣಿಂದ ಹೊಡೆಯುತಾ ಬಂದದರಿಂದ ಹರಪನಹಳ್ಳಿ ಸೋಮಶೇಖರನಾಯಕರು, ಸವಣೂರ ಹಕೀಂಖಾನರು, ರಾಯದುರ್ಗದ ಕೃಷ್ಣಪ್ಪನಾಯಕರು, ಸಹಿತ ಪ್ರಾಣತ್ರಾಣ ಪರಾಯಣರಾಗಿ ಅಂಬಾರಿಯನ್ನು ತಿರುಗಿಸಿಕೊಂಡು ಓಡಿಹೋದರು. ಆಗ ಆನೆಯನ್ನು ನೆಟ್ಟಗೆ ನಡಿಸಿದ್ದರಿಂದ ದುರ್ಗದ ದಂಡು ಅವರ ಬೆನ್ನ ಹತ್ತಿ ಶತ್ರುಗಳನ್ನು ಜಯಿಸಿ ಅವರು ಇಳಿದ ಜಾಗದಲ್ಲಿ ದಂಡನ್ನು ಮೊಕ್ಕಾಂ ಮಾಡಿ ಝಾಂಡ್ಯ ನಿಲ್ಲಿಸಿ ಹಗೆಗಳ ಸೇನೆಯಲ್ಲಿ ಲೂಟಿಗೆ ಬಿದ್ದರು.

ದುರ್ಗದವರಿಗೆ ಸೋಲಾದ್ದು.

ಆಗ ಸವಣೂರ ಹಕೀಂಖಾನನು ತಮ್ಮ ದಂಡನ್ನು ಕುರಿತು—ನಾವು ಶತ್ರುಗಳಿಗೆ ಬೆನ್ನ ಕೊಟ್ಟು ಬಂದದು ಅಯುಕ್ತವಾಯಿತು, ಇಲ್ಲ ಅವರಿಗೆ ಹೊಡೆಯಬೇಕು, ಇಲ್ಲ ಷಹೀದು ಆಗಬೇಕು, ಎರಡಲ್ಲಿ ಒಂದು ಕೆಲಸ, ನಮ್ಮ ತೋಫ್‌ಖಾನೆ ನಗಾರಿ ನಿಷಾನಿ ವಗೈರೆ ಹೋಯಿತು. ನಾವು ವೂರಿಗೆ ಹೋಗುವುದಿಲ್ಲವೆಂದು ಮಸಲತ್ತು ಮಾಡಿ ಪುನಃ ತಿರುಗಿಕೊಂಡು ಹೊಡೆಯುತಾ ಬಂದರು. ದುರ್ಗದ ದಂಡು ಲಡಾಯಿಮಾಡುತಾ ಕಣಕುಪ್ಪೆಗೆ ಬಂದು ಮುಟ್ಟಿತು. ತುಯ್ಯಾಲು ಹಳ್ಳಿ ಕೋಟೆಗೆ

ಮದ್ದು ಗುಂಡು ವಗೈರೆ ಸಹಾಯ ಕೊಟ್ಟು ಜನರನ್ನು ಇಟ್ಟು ಮದಕರಿ ನಾಯಕನು ದುರ್ಗಕ್ಕೆ ಬಂದನು. ಈ ಯುದ್ಧದಲ್ಲಿ ಶತ್ರುಗಳ ಕೈಗೆ ೩ ಆನೆ, ೪ ಫಿರಂಗಿ ಸಿಕ್ಕಿದವು. ಮತ್ತು ದುರ್ಗದ ದೊರೆಗಳ ಕಡೆ ಜೋಗೈಯ್ಯನ ಭರಮೈಯ್ಯ, ವಾಸುದೇವನಾಯಕ, ನೀಲಕಂಠರಾವ್, ಮತ್ತು ಈತನ ಮಗ, ಮಂದಿ ೫೦ ಸಹಾ ಮಡಿದರು.

---

## ೧೭ ನೇ ಅಧ್ಯಾಯ.

## ಕಡೇ ಮದಕರಿನಾಯಕ (ಸಾಗುವುದು)

ಶ|| ೧೬೮೩ ನೇ ವಿಷು ಸಂ|| ದಲ್ಲಿ ತರೀಕೆರೆ ಪಾಳಯಗಾರರೂ, ಜರಿಮಲೆಯವರೂ ಸಹಾ ದುರ್ಗದ ಸೀಮೆಯ ಸರಹದ್ದಿನಲ್ಲಿ ಹಾವಳಿಗೆ ಆರಂಭಿಸಲು, ಇವರನ್ನು ಅಡಗಿಸಿ ಓಡಿಸುವುದರಲ್ಲಿ ಮದಕರಿನಾಯಕನಿಗೆ ಸ್ವಲ್ಪ ಕೆಲಸ ಹಿಡಿಯಿತು. ಕಡೆಗೆ ಅವನಿಗೇ ಜಯವಾಯಿತು.

ಹೈದರಲ್ಲಿಯು ಮೊದಲು ದುರ್ಗಕ್ಕೆ ಬಂದದ್ದು.

ಶ|| ೧೬೮೪ ನೇ ಚಿತ್ರಭಾನು ಸಂ|| ದಲ್ಲಿ ಇನ್ನೊಂದು ರಾಜಿಕ ಸಂಭವಿಸಿತು. ಶ್ರೀರಂಗಪಟ್ಟಣದ ನವಾಬ ಹೈದರಲ್ಲಿಖಾನನು ಅದುವರಿಗೆ ವಿಶೇಷವಾಗಿ ಪ್ರಬಲಿಸಿ ಒಂದು ಲಕ್ಷ ದಂಡಿನೊಡನೆ ಚಿತ್ರದುರ್ಗಕ್ಕೆ ಮುತ್ತಿಗೆ ಹಾಕಲು ಬಂದನು. ದುರ್ಗದ ಮುಖಂಡ ಸರದಾರರು, ಸೇನಾಪತಿಗಳು, ಮನಸಬ್‌ದಾರರು ಸಹಾ ಸಭೆ ಸೇರಿ—ಹೈದರಲ್ಲಿಖಾನನ ದಂಡು ಬಲವಾಗಿದೆ. ದುರ್ಗದ ಸೇನೆಯು ೫೦೦೦೦ ಮಟ್ಟಿಗೆ ಇದೆ, ಮದಕರಿ ನಾಯಕನಿಗೆ ಇನ್ನೂ ವಯಸ್ಸು ಚಿಕ್ಕದು, ಹೈದರಲ್ಲಿಯೊಡನೆ ಭಾರಿಯಾಗಿಯುದ್ಧಕ್ಕೆ ನಿಲ್ಲಲು ದಕ್ಷರು ಕಡಮೆ. ಆದಕಾರಣ ಬಂದಶತ್ರುವನ್ನು ಸದ್ಯದಲ್ಲಿ ಹೇಗಾದರೂ ನಿವಾರಣೆ ಮಾಡುವುದು ಉತ್ತಮ. ಇದುವರೆಗೆ ನಡೆದ ಅನೇಕ ಭಾರಿ ಲಡಾಯಿಗಳಿಂದ ಅನೇಕವಾಗಿ ಯುದ್ಧ ಸಾಮಗ್ರಿಗಳು ಕಡಮೆಯಾಗಿರುವುದು; ಅದೆಲ್ಲವನ್ನೂ ಭರ್ತಿಮಾಡಿಕೊಳ್ಳುವುದು ಅಗತ್ಯವೆಂದು ಯೋಚಿಸಿ ರಾಜಿಯಾಗಿ ವರುಷ ೧ಕ್ಕೆ ೧೦೦೦೦೦ ವರಹ ಕೊಡೋಣ, ಎಂದು ಒಪ್ಪಿಕೊಂಡರು.

ಹೈದರನಿಗೆ ಖಂಡಣಿ ಕೊಡಲು ಒಪ್ಪಿದ್ದು.

ದುರ್ಗದವರು ಹೈದರನಿಗೆ ಮಾಡಿದ ಸಹಾಯ.

ಇದಕ್ಕೆ ಒಪ್ಪಿ ಹೈದರಲ್ಲಿಯು ತನ್ನ ದಂಡನ್ನು ಹಿಂತಿರುಗಿಸಿಕೊಂಡು ಕೂಡಲೆ ಬಂಕಾಪುರಕ್ಕೆ ಹೋಗಿ, ಆ ವೂರಿಗೆ ಮುತ್ತಿಗೆ ಹಾಕಿದನು. ಆ ಕೋಟೆಯು ಹೈದರನಿಗೆ ಸಾಧ್ಯವಾಗಲಿಲ್ಲ. ಆಗ ತನಗೆ ಸಹಾಯ ಮಾಡಿ ಬಂಕಾಪುರವನ್ನು ಜೈಸಿಕೊಡಬೇಕೆಂತಲೂ, ಯುದ್ಧದವೆಚ್ಚವನ್ನೆಲ್ಲಾ ತಾನು ಕೊಡುವುದಾಗಿಯೂ ಹೈದರನು ಒಪ್ಪಿದ್ದರಿಂದ ದುರ್ಗದ ದಂಡುಹೋಗಿ ಆ ವೂರನ್ನು ಅವನಿಗೆ ಹಿಡಿದು ಕೊಟ್ಟಿತು. ಇದಕ್ಕೆ ಹೈದರನು ಸಂತೋಷಪಡುವುದಕ್ಕೆ ಬದಲಾಗಿ ದುರ್ಗದವರ ಪರಾಕ್ರಮಕ್ಕೆ ಅಸೂಯಪಡಲು ಆರಂಭಿಸಿದನು.

ಹೈದರನಿಗಾಗಿ ಮರಾಟಿಯವರಮೇಲೆ ಯುದ್ಧ.

ಈ ಅಸೂಯವನ್ನು ಇನ್ನೂ ಹೆಚ್ಚಿಸುವುದಕ್ಕೆ ಇನ್ನೊಂದು ಸಮಯ ಸಿಕ್ಕಿತು. ಶ್ರೀಮಂತ ಮಾಧವರಾಯನು ೩೦೦೦೦೧ ದಂಡಿನೊಡನೆ ಶ್ರೀರಂಗಪಟ್ಟಣದಮೇಲೆ ಹೊರಟನು. ಪುನಃ ಹೈದರನ ಅಪೇಕ್ಷೆಯಂತೆ ಮದಕರಿನಾಯಕನೂ, ಅವನ ಸೇನೆಯೂ, ಬಹು ರೋಷದಿಂದ ಆ ದಿನ ಸಾಯಂಕಾಲದವರೆಗೂ ಯುದ್ಧ ಮಾಡಿದ್ದರಿಂದ, ಮರಾಟಿಯವರು ಮಾಸೂರು ಕೆರೆಗೆ ಓಡಿಹೋದರು. ಈ ಪ್ರಕಾರ ಶ್ರೀರಂಗಪಟ್ಟಣದವರಿಗೆ ಜಯವನ್ನುಂಟುಮಾಡಿಕೊಟ್ಟು ದುರ್ಗದವರು ಹೊರಟು ಬಂದರು.

ಇದು ಜರುಗಿದ ಕೆಲವು ದಿವಸಕ್ಕೆ ಹೈದರನು ಇಕ್ಕೇರಿಯವರ ಮೇಲೆ ಕದನವನ್ನು ಹೂಡಿದನು. ಅಲ್ಲಿಯೂ ದುರ್ಗದವರ ಸಹಾಯದಿಂದಲೇ ಜಯವಾಯಿತು.

ಗುತ್ತಿ ಮುರಾರಿರಾಯನಿಗೆ ಮಾಡಿದ ಸಹಾಯ.

ಈಚೆಗೆ ಹೈದರನು ಗುತ್ತೀ ಮುರಾರಿರಾಯನಮೇಲೆ ಕದನಕ್ಕೆ ನಿಂತನು. ದುರ್ಗದವರು ಹೈದರನ ಸಹಾಯಕ್ಕೆ ಹೋಗಿದ್ದರು. ಮುರಾರಿರಾಯನು ರಾತ್ರೆಹೊತ್ತು ಮದಕರಿನಾಯಕನ ಪಾಳಯಕ್ಕೆ ಬಂದು ದೊರೆಯನ್ನು ಕಂಡು ಪೂರ್ವ ಸ್ನೇಹದಮೇಲೆ ದೃಷ್ಟಿ ಇಡಬೇಕೆಂದು ಹೇಳಿಕೊಂಡದ್ದರಿಂದ, ಆ ಪಾಳಯಗಾರನಿಗೆ ಯಾವ ಕಡೆಗೂ ಹಾಯದಹಾಗಾ

ಯಿತು; ಆಗ ಮುರಾರಿರಾಯನ ಮೇಲಿನ ಅಭಿಮಾನದಿಂದ ಗುತ್ತಿಯನ್ನು ಸದ್ಯಕ್ಕೆ ಹೈದರನ ವಶಮಾಡಿಸಿ ಬಿಡಿಸಿಕೊಟ್ಟನು ; ಮುರಾರಿರಾಯನು ಅವನ ಸಂಸಾರ ಸಮೇತ ಮರೆಹೊಗಲು, ಅವನನ್ನು ದುರ್ಗಕ್ಕೆ ಕರೆದು ಕೊಂಡುಬಂದು ಸ್ವಲ್ಪ ದಿವಸ ಇರಿಸಿಕೊಂಡಿದ್ದು ಹಿರಿಯೂರ ಬಳಿ ಇರುವ ಮಸಗಲ್ಲು ಎಂಬ ಗ್ರಾಮವನ್ನು ಆತನಿಗೆ ಇನಾಮಾಗಿ ಕೊಟ್ಟು, ಆ ವೂರ ಈಶ್ವರನ ಗುಡಿಯಲ್ಲಿ ಶಿಲಾ ಶಾಸನವನ್ನು ಬರೆಯಿಸಿ ಪಾಳಯಗಾರನು ಚಿತ್ರದುರ್ಗಕ್ಕೆ ಬಂದನು.

ನಿಜಗಲ್ ಮುತ್ತಿಗೆ.

ಹೈದರಲ್ಲಿಯು ನಿಜಗಲ್ಲಿಗೆ ಮುತ್ತಿಗೆ ಹಾಕಿದನು. ಆ ಕೋಟೆ ಬಲವಾಗಿತ್ತು. ಒಂದು ವರುಷ ಸಾಧಿಸಿದಾಗ್ಯೂ ಸಾಧ್ಯವಾಗಲಿಲ್ಲ. ಆಕೋಟೆಯ ಮೇಲಿನಿಂದ ಬಿಸೀ ಎಂಣೆ, ಅಂಬಲಿ, ಸಹಾ ಕಲ್ಲ ಬಂಡೆಯುಮೇಲೆ ಹಾಕುತಾಬಂದರು. ಆ ಕೋಟೆಯನ್ನು ಹಲ್ಲ ಮಾಡುವುದಕ್ಕೆ ಆಗದೇಹೋಯಿತು. ಹೈದರನು ಯಥಾ ಪ್ರಕಾರ ದುರ್ಗದವರ ನೆರವನ್ನು ಕೇಳಿಕೊಂಡನು. ಆಗ ೧೦೦೦೦ ಕಾಲುಬಲವನ್ನು ಕಳುಹಿಸಿದರು. ಈ ಭಟರು ಮುಖಕ್ಕೆ ಕಾವಿಬಂಣ ಬಳಿದುಕೊಂಡು ಅದರಮೇಲೆ ಚಿಕ್ಕೀ ಬಟ್ಟಿನ ನಾಮ ಇಟ್ಟು ಮೂರು ದಿನದ ರೊಟ್ಟಿ ಬುತ್ತಿಯನ್ನು "ನಾಕ್ ಚಾಪ್" ಚೀಲದಲ್ಲಿ ಹಾಕಿ ಬೆನ್ನಿಗೆಕಟ್ಟಿಕೊಂಡು ತಮ್ಮ ಆಯುಧಗಳನ್ನು ತೆಗೆದುಕೊಂಡು ಕೈಯಲ್ಲಿ ಮುಳ್ಳು ಪೊದೆಗಳನ್ನು ಹಿಡಿದು ಹೊರಟರು. ಈ ಸಂದರ್ಭದಲ್ಲಿ ಇನ್ನೊಂದು ವಿಚಿತ್ರವಾದ ಕೆಲಸ ನಡೆಯಿತು. ಸರ್ಕಾರದ ಸಂಬಳದಿಂದಲೇ ಜೀವಿಸುತಾ ಇದ್ದ ಸಿಪಾಯಿಗಳಿಗೆ ಮಕ್ಕಳಾದರೆ ಅಂಥಾ ಮಕ್ಕಳಿಗೆ ಹಾಲು ಬೆಂಣೆ ಸಂಬಳವೆಂದು ಧರ್ಮ ಸರ್ಕಾರದಿಂದ ಕೊಡಿಸುವಹಾಗೆ ಪೂರ್ವದಿಂದಲೂ ನಡೆದು ಬಂದ ಒಂದು ವಾಡಿಕೆ ಇತ್ತು. ಅಂಥಾ ಮಕ್ಕಳಿಗೆ ವಯಸ್ಸು ಬಂದಮೇಲೆ ಅವರಿಗೆ ದಂಡಿನಲ್ಲಿ ಕೆಲಸಕೊಡುತಾ ಇದ್ದರು ಇಂಥಾ ಸಿಪಾಯಿಗಳಲ್ಲಿ ಭಯದಿಂದ ಹಿಮ್ಮೆಟ್ಟಿದ ಒಬ್ಬೊಬ್ಬ ಸಿಪಾಯಿಯ ಸೊಂಟಕ್ಕೆ ಕಬ್ಬಿಣದ ಸರಪಣಿ ಹಾಕಿ ಅದನ್ನು ಹಿಡಿದುಕೊಂಡು ಹೋಗುವಂತೆ ಮಾಡಿದ್ದರು. ಈ ಯುದ್ಧಕ್ಕೆ ಅಂಥವರು

ದುರ್ಗದ ರಾಜರು ಸೇನೆಯವರನ್ನು ಕಾಪಾಡಿದ್ದು.

ಕೆಲವರನ್ನು ಹಿಡಿದುಕೊಂಡು ಬಂದಿದ್ದರು. ಶತ್ರುಗಳ ಕಡೆಯವರು ಇದೇನೆಂದು ಕೇಳಲಾಗಿ, ಆ ಸಿಪಾಯಿಗಳು—ಅವರನ್ನು ಬಿಟ್ಟು ಬಿಟ್ಟರೆ ಅವರು ಮನುಷ್ಯರನ್ನು ತಿನ್ನುತ್ತಾರೆಂದು ಭೀಕರವಾದ ಮಾತುಗಳನ್ನಾಡಿದರು. ಇದನ್ನು ಕೇಳಿ ನಿಜವೆಂದು ಭಾವಿಸಿ ಶತ್ರುಸೇನೆಯವರು ಓಡುತಿದ್ದರು.

ದುರ್ಗದ ದಂಡಿನ ಸಾಹಸ.

ರಾಜನು ಇಂಥಾ ಸೇನೆಯೊಡನೆ ಹೊರಟು ನಿಜಗಲ್ಲಿಗೆ ಎರಡು ಹರದಾರಿಯಲ್ಲಿ ಡೇರೇ ಹಾಕಿಕೊಂಡು ಇಳಿದುಕೊಂಡನು. ಇದರ ಸುತ್ತಲೂ ಬಿಚ್ಚುಕತ್ತಿಯವರು ಪಹರೆ ಕೊಡುತಾ ಇದ್ದರು ; ಆಗ ರಾಜನು ನವಾಬನ ಭೇಟಿಮಾಡಿಕೊಂಡು ಬಂದನು. ಚಿತ್ರದುರ್ಗದ ದಂಡಿನಲ್ಲಿ ಅರ್ಧ ನಿಜಗಲ್‌ದುರ್ಗದ ಹಿಂದುಗಡೆಗೆ ಹೋಗಿ ಯುದ್ಧಕ್ಕೆ ನಿಂತಿತು. ರಾತ್ರಿ ೧೭॥ ಗಳಿಗೆ ಪರ್ಯಂತ ಉಡಗಳನ್ನು ಮೇಲಕ್ಕೆ ಎಸೆದು ಅದರ ಮೂಲಕ ಹಲ್ಲಾಮಾಡಲು ಯತ್ನಿಸಿದರು. ಹೀಗಿರುವಲ್ಲಿ ಮುಳ್ಳು ಪೊದೆಗಳನ್ನು ತಂದಿದ್ದವರು ಅವುಗಳಿಗೆ ಅಲ್ಲಲ್ಲಿ ಬೆಂಕಿ ಹತ್ತಿಸಿದರು. ಈ ದಂಡಿನವರು ಅಡಿಗೇ ಮಾಡಿಕೊಳ್ಳುತಾರೆಂದು ತಿಳಿದು ಕೋಟೆಯೊಳಗಿನವರು ಕೈ ಕಡಮೆಮಾಡಿ ಮಲಗಿಕೊಂಡರು. ಈ ಸುಳುವನ್ನು ತಿಳಿದು ದುರ್ಗದವರು ನಿಜಗಲ್ಲಿಗೆ ಹಲ್ಲಾಮಾಡಿ ಕೋಟೆಯೊಳಕ್ಕೆ ಇಳಿದು ಕೋಟೆಬಾಗಿಲ ಅಗಣಿಯನ್ನು ತೆಗೆದರು. ಆಗ ಮದಕರಿನಾಯಕನು ಕುರಚೆಹಾಕಿಸಿಕೊಂಡು ಕೂತು ಶತ್ರುಗಳ ತಲೆಯನ್ನು ತಂದವರಿಗೆ ತಲೆ ೧ಕ್ಕೆ ೧೦ ವರಹ ಇನಾಂ ಕೊಡುವುದಾಗಿ ಅಪ್ಪಣೇ ಮಾಡಿದನು. ಅನೇಕ ತಲೆಗಳನ್ನು ಭಟರು ತಂದು ರಾಶಿ ಹಾಕಿದರು. ಅನೇಕರು ಆ ಬರುಡೆಗಳನ್ನು ಕೈಯಲ್ಲಿ ಹಿಡಿದು ಬಾಯಲ್ಲಿ ಕಚ್ಚಿಕೊಂಡು ಸಹಾ ಬಂದು ದೊರೆಗೆ ನಿವಾಳಿಹಾಕುತಿದ್ದರು. ಹೈದರನು ಇದನ್ನು ಕೇಳಿ ರಾಜನ ಬಳಿಗೆ ಬಂದು ನೋಡಿ ಬಹಳ ಸಂತೋಷಪಟ್ಟು ಆ ಕೊಲೆಯನ್ನು ನಿಲ್ಲಿಸಬೇಕೆಂದು ಹೇಳಿಕೊಂಡನು. ಆಗ ಆ ಘೋರವಾದ ಕೃತ್ಯ ನಿಂತಿತು. ನಿಜಗಲ್ಲನ್ನು ಹೈದರನಿಗೆ ವಶಮಾಡಿಕೊಟ್ಟರು. ಇದೇ ಪ್ರಕಾರ ಮದಕರಿನಾಯಕನು ಅನೇಕ ಕೋಟೆಗಳನ್ನು ಆ ನವಾಬನಿಗೆ ಸಾಧಿಸಿ ಕೊಟ್ಟನು. ಹೈದರನು ಇದಕ್ಕಾಗಿ ದುರ್ಗದವರಿಗೆ ಏನೂ ಕೊಡಲಿಲ್ಲ.

ಪೂನೆ ಶ್ರೀಮಂತರೊಡನೆ ಸ್ನೇಹ.

ಇಂಥಾ ಅತಿಶಯವಾದ ಚಿತ್ರದುರ್ಗದವರ ಪರಾಕ್ರಮವನ್ನೂ ಸಾಹಸವನ್ನೂ ಕೇಳಿ ಪೂನೆ ಶ್ರೀಮಂತದೊಡ್ಡ ಮಾಧವರಾಯನು ಆಶ್ಚರ್ಯಪಟ್ಟು, ದಕ್ಷಿಣದೇಶಕ್ಕೆ ವಿಜಯ ಯಾತ್ರೆಗಾಗಿ ಬಂದಾಗ ಹೈದರನ ಸೀಮೆಯಮೇಲೆ ನುಗ್ಗಿ ಊರುಗಳನ್ನು ತೆಗೆದುಕೊಳ್ಳುತಾ ಮದಕರಿನಾಯಕನ ಸಹಾಯವನ್ನು ಅಪೇಕ್ಷಿಸಿ, ಯುದ್ಧದ ವೆಚ್ಚವನ್ನು ತಾನು ಕೊಡುವುದಾಗಿ ಒಪ್ಪಿ ಪತ್ರಬರಿಸಿದನು. ಹೈದರಲ್ಲಿಯೊಡನೆ ಬಹಳ ಸ್ನೇಹವಾಗಿಯೇ ಇದ್ದಾಗ್ಯೂ ಶ್ರೀಮಂತರಕಡೆಗೆ ತಿರುಗಿಕೊಳ್ಳಬೇಕೆಂದು ದುರ್ಗದವರು ಮನಸ್ಸುಮಾಡಲು ತತ್ಕ್ಷಣಕ್ಕೆ ಏನುಕಾರಣವಾಯಿತೋ ತಿಳಿಯಬರುವುದಿಲ್ಲ. ಹೈದರಲ್ಲಿಯು ದುರ್ಗದವರಿಗಿಂತಲೂ ಬಲವಾದವನು, ಸಮೀಪದಲ್ಲಿರುವ ಇವನು ಎಂದಾದರೂ ತಮಗೆ ಕಿರುಕೊಳವನ್ನುಂಟುಮಾಡದೇ ಇರುವುದಿಲ್ಲ, ಪೂನೇ ಶ್ರೀಮಂತರು ತನ್ನಲ್ಲಿ ಸ್ನೇಹವನ್ನು ತಾವಾಗಿ ಅಪೇಕ್ಷಿಸಿದಾರೆ, ಈ ಸಮಯದಲ್ಲಿ ಅವರ ಮೈತ್ರಿಯನ್ನು ಬಿಟ್ಟುಬಿಟ್ಟರೆ ಅವರೂ ತನಗೆ ಶತ್ರುವಾಗಬಹುದು, ಬಲವಾದ ಇಬ್ಬರ ಹಗೆತನಕ್ಕಿಂತಲೂ ಒಬ್ಬರಲ್ಲಿ ಸ್ನೇಹವನ್ನು ಬಳಸುವುದು ಮೇಲು, ಇವರಿಬ್ಬರಲ್ಲಿ ಪೇಶ್ವೆಗಳು ಬಲವಾದ ಸಂಸ್ಥಾನದವರು, ಇವರ ಮೈತ್ರಿಯಿಂದ ಸಮೀಪವಾದ ಶತ್ರುವನ್ನು ನಾಶಮಾಡಿದರೆ ಎಂದಾದರೂ ತನಗೆ ಉತ್ತಮವಾಗುವುದು, ಎಂದು ಯೋಚಿಸಿ ಮದಕರಿನಾಯಕನು ಮರಾಟೆಯವರಲ್ಲಿ ಕರಾರು ಮಾಡಿಕೊಂಡು ಅವರಿಗೆ ಸಹಾಯಮಾಡಲು ಒಪ್ಪಿದನು. ಇದರಂತೆ ಭಾರಿಯಾದ ತನ್ನ ದಂಡನ್ನು ತೆಗೆದುಕೊಂಡು ಹೊರಟು ಹೈದರನಿಗೆ ಸೇರಿದ್ದು ಮರಾಟೆಯವರಿಗೆ ಸಾಧ್ಯವಿಲ್ಲದೇ ಹೋಗಿದ್ದ ಸಾಮಂತಗಿರಿದುರ್ಗ, ಹುತ್ರಿದುರ್ಗ, ನುಗ್ಗೆಹಳ್ಳಿ, ಹಾಗಲ್ವಾಡಿ, ಬಾಣಾವಾರ, ಮೊದಲಾದ ಕೋಟೆಗಳನ್ನು ತೆಗೆದುಕೊಂಡು ಶ್ರೀಮಂತರಿಗೆ ಠಾಣ್ಯಾ ಹಾಕಿಸಿಕೊಟ್ಟನು.

ಆನವಟ್ಟಿ ಮುತ್ತಿಗೆಯಲ್ಲಿ ಹೈದರನನ್ನುಗೆದ್ದುದು.

ತರುವಾಯ ಎರಡನೇ ಸಾರಿ ಮಾಧವರಾವ್ ಪೇಶ್ವೆಯು ೩೦೦೦೦೦ ಫೌಜಿನೊಡನೆ ದಕ್ಷಿಣದೇಶಕ್ಕೆ ಹೊರಟು ಹೈದರನ ಸೀಮೆಗಳನ್ನು ತೆಗೆದುಕೊಳ್ಳುತಾಬಂದನು. ಈ ಸಂದರ್ಭದಲ್ಲಿ ಪೂರ್ವದ ಸ್ನೇಹವನ್ನು ಮರೆಯದೆ

ತನಗೆ ಸಹಾಯಮಾಡಬೇಕೆಂದು ವಿಶೇಷ ಗೌರವವಾಗಿ ಮಾಧವರಾಯನು ದುರ್ಗದ ಪಾಳಯಗಾರರಿಗೆ ಲೇಖನವನ್ನು ಬರೆದು ಕಳುಹಿಸಿದನು ಇದನ್ನು ನೋಡಿಕೊಂಡು ಮದಕರಿನಾಯಕನು ಸಂತೋಷದಿಂದ ತನ್ನ ದಂಡನ್ನು ತೆಗೆದುಕೊಂಡುಹೋಗಿ ಆನವಟ್ಟಿ ಕೋಟೆಗೆ ಮುತ್ತಿಗೆ ಹಾಕಿದ್ದ ಮಾಧವರಾಯನಿಗೆ ವಿಶೇಷವಾಗಿ ಸಹಾಯಮಾಡಿ ಆ ಕೋಟೆಯನ್ನು ಹಿಡಿದು ಮರಾಟೆಯವರ ವಶಮಾಡಿದನು. ಈ ಯುದ್ಧದಲ್ಲಿ ದುರ್ಗದ ಬೇಡರು ನಿಜಗಲ್ಲು ಮುತ್ತಿಗೆಯಲ್ಲಿ ತೋರಿಸಿದ್ದಕ್ಕಿಂತ ಒಂದಕ್ಕೆ ಹತ್ತರಷ್ಟು ಕ್ರೌರ್ಯವನ್ನು ತೋರಿಸಿದರು. ದೊಡ್ಡ ಜಗುಲಿಯನ್ನು ಆ ತಲೇ ಬುರುಡೆಗಳಲ್ಲಿಯೇ ಕಟ್ಟಿಸಿ ಮಾಧವರಾಯನನ್ನು ಅಲ್ಲಿಗೆ ಕರೆದುಕೊಂಡುಹೋಗಿ ದುರ್ಗದ ದೊರೆಯು ಪೇಶ್ವೆಯನ್ನು ಕುರಿತು— ಸ್ವಾಮಿ ಶತ್ರುಗಳ ಶಿರಸ್ಸಿನಿಂದ ವೀರಾಸನವನ್ನು ಕಟ್ಟಿಸಿದೇನೆ, ಇವರ ಮೇಲೆ ತಾವು ಕೂತುಕೊಳ್ಳಬೇಕು, ರಕ್ತದಿಂದ ಅಭಿಷೇಕಮಾಡಿಸುತೇನೆ ಎಂದನು. ಇದಕ್ಕೆ ಪೇಶ್ವೆಯು—ನೀವು ಮಾಡಿದ ಅಧಿಕವಾದ ಸಹಾಯದಿಂದ ನಾನು ಕೇವಲ ಆನಂದ ಭರಿತನಾದೆ, ಆದರೆ ನಾವು ಬ್ರಾಹ್ಮಣರು, ನೀವು ಅಪೇಕ್ಷೆಮಾಡಿರುವ ಕೆಲಸಕ್ಕೆ ನಾನು ಒಪ್ಪಲಾರೆ, ನೀವು ಕ್ಷತ್ರಿಯರು, ನಿಮಗೆ ಇದು ತಕ್ಕದ್ದು, ಕೋಟೆಯೇನೋ ನಮ್ಮ ಸ್ವಾಧೀನವಾಯಿತು ಇನ್ನು ಇಂಥಾ ಅಕೃತ್ಯವನ್ನು ನಿಲ್ಲಿಸಬೇಕು, ಎಂದು ಹೇಳಿದನು. ಆದಾಗ್ಯೂ ಮದಕರಿನಾಯಕನು ಆ ಅತಿ ಭಯಂಕರವಾದ ವೀರಾಸನದ ಮೇಲೆ ಕೂತುಕೊಂಡು, ಮನುಷ್ಯರ ರಕ್ತದಿಂದ ಅಭಿಷೇಕವನ್ನು ಮಾಡಿಸಿಕೊಂಡನು. ಪುನಃ ಶ್ರೀಮಂತನು ಈ ಘೋರವಾದ ಕೃತ್ಯವನ್ನು ನಿಲ್ಲಿಸಬೇಕೆಂದು ಬಲವಂತಮಾಡುವವರೆಗೂ ಈ ಕೆಲಸವನ್ನು ನಡೆಸಿದರು. ಇಂಥಾ ಪಾತಕವನ್ನು ಯಾರೂ ಯಾವ ಯುದ್ಧದಲ್ಲಿಯೂ ನಡಿಸಿರಲಿಲ್ಲ. ಹಿಂದಿನ ಪಾಳಯಗಾರರು ಸಹಿತ ಇಂಥಾ ಕೆಲಸಕ್ಕೆ ಹೋದವರಲ್ಲ ಈ ಮದಕರಿನಾಯಕನು ಮಾಡಿದ ಅಸಹ್ಯವಾದ ಘೋರಕೃತ್ಯದಲ್ಲಿ ಇನ್ನೊಂದಿದೆ. ತನ್ನ ಸೇನೆಯವರು ಮೃಗಪಕ್ಷಿಗಳನ್ನು ಕೊಂದು ತಲೆ ಬುರುಡೆಗಳ ಒಲೆಗುಪ್ಪನ್ನು ಇಟ್ಟು ಮಾಂಸಾದಿಗಳನ್ನು ಬೇಸಿಕೊಳ್ಳುವಂತೆ

ಮದಕರಿನಾಯಕನ ಕ್ರೌರ್ಯ.

ಅಪ್ಪಣೆಮಾಡಿದನು. ಇಂಥಾ ಕೃತ್ಯವನ್ನು ನೋಡಿ ಶತ್ರುಸೇನೆಯವರು ಕಡೆಗೆ ಮುಸಲ್ಮಾನರೂ ಸಹಿತ ಭೀತಿಪಟ್ಟು ರೋಸಿಹೋದರು. ಹೈದ ರನ ದಂಡು ಸೋತು ಶ್ರೀರಂಗಪಟ್ಟಣಕ್ಕೆ ಹೊರಟುಹೋಯಿತು.

ನಂಬಿಕೆಗೆ ಮೋಸ

ಈ ಕಡೇ ಮದಕರಿನಾಯಕನ ನಡತೆಯು ಯಾರಿಗೂ ಸಮಾಧಾನವಾಗಿರಲಿಲ್ಲ ಒಂದು ಸಾರಿ ಒಬ್ಬರ ಸ್ನೇಹವನ್ನು ಮಾಡಿ ಅವರಿಗೆ ಸಹಾಯಮಾಡುವುದಾಗಿ ಒಪ್ಪಿಕೊಳ್ಳುವುದು, ಯುದ್ಧಮಾಡುವಾಗ ಲೇಶವೂ ಧರ್ಮದ ಮೇಲೆ ದೃಷ್ಟಿ ಇಡದೆ ಘೋರತಮವಾದ ಕೆಲಸಗಳನ್ನು ಮಾಡುವುದು, ನಂಬಿಸಿ ಸಮಯದಲ್ಲಿ ಮೋಸಮಾಡುವುದು, ಹೀಗೆ ಮಾಡುತಾ ಬಂದನು. ಪರರಾಜರಿಗೆ ಇವನಲ್ಲಿ ಭರವಸೆ ತಪ್ಪಿಹೋಯಿತು. ಹೈದರಲ್ಲಿಗೆ ಇವನಲ್ಲಿ ಪೂರಾ ದ್ವೇಷ ಹುಟ್ಟಿತು. ಹೇಗಾದರೂ ಇವನನ್ನು ಮುರಿಯಬೇಕೆಂದು ಹೈದರನು ಉದ್ಯುಕ್ತನಾದನು

ಹೈದರನ ಉಪಾಯ

ಆದರೆ ಇದು ನೆರವೇರುವುದು ಹೇಗೆ? ಮದಕರಿನಾಯಕನಿಗೆ ಪೇಶ್ವೆಗಳ ಬಲ ಚನ್ನಾಗಿದೆ. ಇವನನ್ನು ಕೆಣಕಿದಲ್ಲಿ ಮರಾಟೆಯವರ ಪರಶುರಾಂಭಾವು ಸಹಾಯಕ್ಕೆಬಂದು ಶ್ರೀರಂಗಪಟ್ಟಣದ ಗಡಿಗಳ ಮೇಲೆ ಬಿದ್ದರೆ ಇತ್ತ ಮಾಧವ ರಾಯನೊಡನೆಯೂ ಅತ್ತ ಪಾಳಯಗಾರನೊಡನೆಯೂ ಜಗಳವನ್ನು ಹೂಡಬೇಕಾಗುವುದು. ಇದು ಕಷ್ಟವಾದ ಕೆಲಸ. ಆದಕಾರಣ ಭೇದೋಪಾಯದಲ್ಲಿ ಕಾರ್ಯಸಾಧನೆ ಮಾಡಿಕೊಳ್ಳಬೇಕು. ಈ ಪಾಳಯಗಾರನು ಚಿತ್ರದುರ್ಗದ ಕೋಟೆಯಲ್ಲಿಯೇ ಇದ್ದರೆ ಅಲ್ಲಿ ಹಲ್ಲಾಮಾಡಿ ಸಾಧಿಸಲು ಹೋದಾಗ ಮರಾಟೆಯವರ ಹಾವಳಿಯು ತನ್ನ ಸೀಮೆಗೆ ಚನ್ನಾಗಿ ವ್ಯಾಪಿಸುವುದು. ಹೇಗಾದರೂ ಪಾಳಯಗಾರನು ಅತನ ದುರ್ಗದಿಂದ ಈಚೆಗೆ ಬರುವಹಾಗೆ ಮಾಡಿ ಅವನನ್ನು ಕೈಸೆರೆ ಹಿಡಿಯಬೇಕೆಂದು ಹೈದರಲ್ಲಿಯು ನಿಷ್ಕರ್ಷೆ ಮಾಡಿಕೊಂಡು, ತಾನು ದುರ್ಗಕ್ಕೆಬರಲು ಆಗುವುದಿಲ್ಲ, ಮದಕರಿನಾಯಕನೇ ಬಂದು ತನಗೆ ಭೇಟಿಕೊಡಬೇಕೆಂದು ಖರೀತಾ ಬರೆಯಿಸಿ ಖಿಲ್ಲತ್ತನ್ನು ಕೊಟ್ಟು ವಕೀಲರ ಮೂಲಕ ಕಳುಹಿಸಿದನು. ಆಗ ಮದಕರಿನಾಯಕನು ತನಗೆ ದೇಹಕ್ಕೆ ಆಲಸ್ಯವಾದಕಾರಣ ಬರುವು

ದಕ್ಕೆ ಆಗುವುದಿಲ್ಲವೆಂದು ಜವಾಬನ್ನು ಬರಿಸಿದನು. ಈ ಖರೀತ ತಲಪಿದ ಕೂಡಲೆ ಹೈದರನು ಖಂಡಣೀ ವೊಬಲಗನ್ನಾದರೂ ಕಳುಹಿಸಬೇಕೆಂದು ಬರಸಿದನು. ಇಷ್ಟರಲ್ಲಿಯೇ ನವಾಬನಿಗೆ ಬೆನ್ನಮೇಲೆ ಅರಸುಹುಣ್ಣು ಎದ್ದು ಅವನು ತೀರಿಹೋದನೆಂದು ವರ್ತಮಾನ ಹುಟ್ಟಿತು. ಆಗ ದುರ್ಗದ ದೊರೆಯು ಖಂಡಣಿಯನ್ನು ಕೊಡದೆ ನಿಲ್ಲಿಸಿದನು. ಇದು ತಿಳಿದ ಕೂಡಲೆ ಹೈದರನು ತನ್ನ ದಂಡನ್ನು ಹೊರಡಿಸಿಕೊಂಡು ಮದ್ದಗಿರಿ, ತುರುವೇಕೆರೆ, ಆ ಸಮೀಪಕ್ಕೆ ಬಂದು ಇಳಿದನು.

ಮತ್ತೋಡು ಹಾಲಪ್ಪನಾಯಕನ ದ್ರೋಹ.

ಇಷ್ಟರಲ್ಲಿ ದುರ್ಗದ ದೊರೆಯ ಭಾವಮೈದನಾದ ಮತ್ತೋಡು ಹಾಲಪ್ಪನಾಯಕನೆಂಬುವನು ದೊರೆಯಲ್ಲಿ ದ್ವೇಷವನ್ನು ಮಾಡಿಕೊಂಡು—ದುರ್ಗದ ದನಗಳು ತನ್ನ ಸೀಮೆಯ ಸರಹದ್ದಿನಲ್ಲಿ ಬಂದು ಮೆಯ್ಯುತಾ ಇವೆ, ಅವುಗಳನ್ನು ತಾನು ಕಟ್ಟಿಹಾಕುತೇನೆ, ತನಗೆ ಸಹಾಯವನ್ನು ಕೊಡಬೇಕು, ಎಂದು ಹೈದರಲ್ಲಿಖಾನನನ್ನು ಕೇಳಿಕೊಂಡನು. ಇದಕ್ಕೆಒಪ್ಪಿ ನವಾಬನು ತನ್ನ ಭಾವಮೈದ ಮೊಖದುಂಸಾಬಿ, ಮೊಹರ್ದಿ ಸಾಬಿ ಇವರ ಸಂಗಡ ಸ್ವಲ್ಪ ದಂಡನ್ನು ಕಳುಹಿಸಿ ತಾನು ಸೇನೆಯೊಡನೆ ಸೀರಾಮೊಕ್ಕಾಂಗೆ ಬಂದು ಖಂಡಣಿ ಹಣವನ್ನು ಕಳುಹಿಸಬೇಕೆಂದು ಸಂಡಣಿ ಸವಾರರನ್ನು ದುರ್ಗಕ್ಕೆ ಕಳುಹಿಸಿದನು.

ಖಂಡಣಿ ಕಳುಹಿಸಿದ್ದು.

ಈ ವರ್ತಮಾನವೆಲ್ಲಾ ಚನ್ನಾಗಿ ತಿಳಿದಕೂಡಲೆ ಪಾಳಯಗಾರನು ತನ್ನ ಕಡೆ ವಕೀಲರಾದ ಬಾಳಪ್ಪ, ಸಾರ್ವಭೌಮರಾವ್ ಇವರೊಡನೆ ಖಂಡಣಿ ಹಣ ೨೦೦೦೦೦ ವರಹವನ್ನೂ ಖಿಲ್ಲತ್ತನ್ನೂ ಕೊಟ್ಟು ಕಳುಹಿಸಿದನು. ಹೈದರನು ಈ ವಕೀಲರನ್ನು ಬಹು ಮರ್ಯಾದೆಯಿಂದ ಕಂಡು, ತನ್ನ ಕೃತ್ರಿಮ ಸಾಗಲಿಲ್ಲವಲ್ಲಾ ಎಂಬ ವ್ಯಸನವನ್ನು ಮುಚ್ಚಿಕೊಂಡು ಅವರನ್ನು ಕುರಿತು ಮಾಡಿದ ಸಂಭಾಷಣೆಯು ಸ್ವಾರಸ್ಯವಾಗಿದೆ, ಆದ್ದರಿಂದ ಅದನ್ನು ಇಲ್ಲಿ ಬರೆದಿದೆ.

## ದುರ್ಗದ ವಕೀಲರ ಸಂಭಾಷಣೆ.

ಹೈದರಲ್ಲಿಖಾನ್.— ಈಗಲಾದರೂ ರಾಜಾಸಾಹೇಬರು ಭೇಟಿಗೆ ದಯ ಮಾಡುತಾರೋ ಇಲ್ಲವೋ ?

ವಕೀಲರು.—ಅವರೂ ಖಾವಂದರು, ತಾವೂ ಖಾವಂದರು, ಧಣಿಯ ಮರ್ಜಿಯು ಸೇವಕರಿಗೆ ಹೇಗೆ ತಿಳಿಯ ಬೇಕು ? ಆರೋಗ್ಯವಾದಮೇಲೆ ಭೇಟಿಗೆ ಹೋ ಗಬೇಕಂತ ಪ್ರಸ್ತಾಪ ಮಾಡುವುದು ಮಾತ್ರ ಗೊ ತ್ತಿದೆ. ತಮಗೂ ಅವರ ಭೇಟಿಯನ್ನು ಮಾಡ ಬೇಕೆಂಬ ಅಪೇಕ್ಷೆ ಬಹಳವಾಗಿದೆ. ಉಭಯತ್ರರ ಮರ್ಜಿಯೂ ಏಕರೀತಿ ಇರುವಾಗ, ಭೇಟಿಯಾ ಗಲು ಅಭ್ಯಂತರವೇನೂ ತೋರುವುದಿಲ್ಲ.

ಹೈದರ.—ರಾಜಾ ಸಾಹೇಬರು ಜಂಗಿಸರಂಜಾಮು ತಯಾರ್ಮಾಡಿ ಸುತಾ ಇದಾರಂತೆ, ಪಟ್ಟಣಕ್ಕೆ ಮಳೆ ಬಾರದಿದ್ದರೆ ನೀರಿನ ಆಮದಾನಿ ಇಲ್ಲವೆಂತ ಕೇಳುತೇವೆ, ಗಡ ಖಿಲ್ಲೇದ ತಟಾಕದಲ್ಲಿ ತೋಪಿನ ಅವಾಜಿಗೆ ನೀರು ನಿಲ್ಲುವುದಿಲ್ಲ, ಚಿತ್ರದುರ್ಗದ ಜಾಗ ನಾಮರ್ದ ಎಂತ ಕೇಳುತೇವೆ. ಸೀಮೆ ಎಷ್ಟು ಲಕ್ಷವರಹದ್ದು.

ವಕೀಲರು—ಈಗ ಜಂಗೀಸರಂಜಾಮು ಏನೂ ತಯಾರ್ಮಾಡಿಸು ವುದಿಲ್ಲ. ಚಿತ್ರದುರ್ಗದ ಸಂಸ್ಥಾನಕ್ಕೆ ಅಜೂಬಾಜು ಬಿದನೂರು, ಹರಪನಹಳ್ಳಿ, ರಾಯದುರ್ಗ, ನಿಡ ಗಲ್ಲು, ತರೀಕೆರೆ ವಗೈರೆ ಪಾಳಯಗಾರರು ಶತ್ರುಗ ಳಾಗಿರುವುದರಿಂದ, ಚಿತ್ರದುರ್ಗದ ಪೂರ್ವದ ದೊರೆ ಗಳು ತಯಾರ್ಮಾಡಿಸಿ ಹಾಕಿರುವ ಮದ್ದುಗುಂಡು ತೋಫುಖಾನೆ ಬಾಣ ಮುಂತಾದ್ದರ ಜಖೀರು ಬಹ ಳವಾಗಿದೆ. ಹಂನೆರಡು ವರುಷ ಕೋಟೆಗೆ ಮುತ್ತಿಗೆ ಆದಾಗ್ಯೂ ಜಂಗಿಸರಂಜಾಮು ಕಮ್ಮಿಯಾಗುವಹಾ

ಗಿಲ್ಲ. ಖಿಲ್ಲೇದಲ್ಲಿ ಫೌಜು ಆಯುಧ ಸಮೇತ ಒಂದೇ ಮನಸ್ಸಿನಿಂದ ಯುದ್ಧಾಪೇಕ್ಷೆಯಲ್ಲಿ ಇದೆ. ಕೋಟೆಯೊಳಗೆ ನೀರು ಕಮ್ಮಿಯಾಗುವುದಿಲ್ಲ. ಪೂರ್ವದಲ್ಲಿ ರಸಸಿದ್ಧರು ಬಂದು ತಮ್ಮ ಆಸ್ತಿಕಕ್ಕೆ ಎಂಥಾ ಅನಾವೃಷ್ಟಿಕಾಲದಲ್ಲಿಯೂ ನೀರಿರಬೇಕೆಂದು ಪ್ರಾರ್ಥಿಸಿದಪ್ರಕಾರ ದೇವರ ವರವಾಗಿದೆ. ಹಿಂದಿನ ಯುಗದಲ್ಲಿ ಹಿಡಿಂಬಾಸುರನು ಭೀಮನಿಗೆ ಸೋತುಬಿದ್ದುಕೊಂಡಿರುವಾಗ-ನಾನನಕ ಸೋತೆ, ಅದಂದಕ್ಕೆ ಇಲ್ಲಿನ ಜನರು ಯಾವಾಗಲೂ ಆರೋಗ್ಯವಾಗಿದ್ದು ಯಾರುಬಂದರೂ ಗೆಲ್ಲಬೇಕೇ ಹೊರತು ಸೋಲಕೂಡದು ಎಂದು ಬೇಡಲು, ಭೀಮನು ಆ ಪ್ರಕಾರ ವರವನ್ನು ಕೊಟ್ಟಿದಾನೆ.

ಆದ್ದರಿಂದ ಚಿತ್ರದುರ್ಗವು ಬಹಳ ಗಂಡುಭೂಮಿಯಾಗಿದೆ. ಹಿಂದಕ್ಕೆ ಅನೇಕರು ಪ್ರಯತ್ನಮಾಡಿದರು. ಅವರಿಗೆ ಇದು ಸ್ವಾಧೀನವಾಗಲಿಲ್ಲ. ಸೀಮೆ ಇಷ್ಟು ಲಕ್ಷದ್ದೆಂದು ಲೆಕ್ಕಬರೆಯಲು ದಂಡಕವಿಲ್ಲ. ಖಜಾನೆ ನೆಲೆ ತಿಳಿಯದು. ಪ್ರಜೆಗಳು ಸಂತೋಷಿಗಳಾಗಿದಾರೆ.

ಹೀಗೆ ಈ ವಕೀಲರು ಕೊಟ್ಟ ಜವಾಬಿನಿಂದ ಏನೂ ಗೊತ್ತಾಗಲಿಲ್ಲವೆಂದು ತಿಳಿದು ಅವರಿಗೆ ಖಿಲ್ಲತ್ತು ಕೊಟ್ಟು ಕಳುಹಿಸಿ, ಚಿತ್ರದುರ್ಗದ ಪಾಳಯಗಾರರು ತನ್ನ ಭೇಟಿಗೆ ಬರಲೇಬೇಕೆಂದು ಹೈದರಲ್ಲಿಯು ಖಂಡಿತವಾಗಿ ಖರೀತಾ ಬರೆಯಿಸಿದನು. ವಕೀಲರು ದುರ್ಗಕ್ಕೆ ಬಂದು ಸೇರಿ ದೊರೆಗೆ ಶ್ರೀರಂಗಪಟ್ಟಣದಲ್ಲಿ ನಡೆದ ಸಂಗತಿಯನ್ನು ಅರಿಕೆಮಾಡಿದರು.

---

## ೧೮ ನೇ ಅಧ್ಯಾಯ.

### ಕಡೇ ಮದಕರಿನಾಯಕ—ಹೈದರನೊಡನೆ ಯುದ್ಧಸನ್ನಾಹ.

ಈ ಸಂಗತಿಗಳೆಲ್ಲವನ್ನೂ ನೋಡಿಕೊಂಡಿದ್ದ ಕೆಲವು ಒಳದೇಶದ ಶತ್ರುಗಳು ಇಂಥಾ ಸಮಯಬರಲೆಂದು ನಿರೀಕ್ಷಿಸಿಕೊಂಡಿದ್ದರು. ದೊರೆ

ಯ ಭಾವಮೈದನಾದ ಮತ್ತೋಡು ಹಾಲಪ್ಪನಾಯಕನು ಹೈದರನ ಕಡೆಗೆ ಸೇರಿಕೊಂಡನು. ದುರ್ಗದ ವಕೀಲರು ಖಂಡಣಿ ಹಣವನ್ನು ಖಿಲ್ಲತ್ತನ್ನೂ ಮದಕರಿನಾಯಕನ ಕಡೆಯಿಂದ ತಂದು ನವಾಬ ಹೈದರಲ್ಲಿಗೆ ಒಪ್ಪಿಸಿ ತಕ್ಕ ಮರ್ಯಾದೆಯನ್ನು ಹೊಂದಿ ಶ್ರೀರಂಗಪಟ್ಟಣದಿಂದ ಹೊರಟು ಹೋದ ತರುವಾಯ, ಹೈದರನು ತನ್ನ ಭಾವಮೈದಂದಿರಾದ ಮಖದುಂ ಸಾಬಿ, ಮೊಹದಿ೯ಸಾಬಿ ಇವರಿಬ್ಬರನ್ನೂ ಕೆಲವು ಸೇನೆಯೊಡನೆ ದುರ್ಗದ ಸರಹದ್ದಿನಲ್ಲಿ ಬಿಟ್ಟು ಹೊರಟು ಹೋದನು. ಆಸಮಯದಲ್ಲಿ

ಹೈದರನ ಮೋಸ

ಮತ್ತೋಡು ಹಾಲಪ್ಪನಾಯಕನು—ಚಿತ್ರದುರ್ಗದ ದನಗಳು ಬೂದಿಹಾಳ್ ಚರಾಯದಲ್ಲಿ ಮೆಯ್ಯುವವು, ಅವುಗಳನ್ನು ತಾನು ಹಿಡಿಯುತ್ತೇನೆ, ಇದಕ್ಕಾಗಿ ತನಗೆ ಸಹಾಯಮಾಡ ಬೇಕು, ಎಂದು ಹೈದರಲ್ಲಿಯನ್ನು ಕೇಳಿಕೊಂಡನು. ಅದಕ್ಕೆ ನವಾಬನು ಒಪ್ಪಿ—ದುರ್ಗದ ಪಾಳಯಗಾರನು ನಮ್ಮ ಭೇಟಿಗೆ ಬಾರದೆ ತಪ್ಪಿದಾನೆ, ನಿಮ್ಮ ಫೌಜು ಸಮೇತ ಹೋಗಿ ಹಾಲಪ್ಪನಾಯಕನಿಗೆ ಸಹಾಯಮಾಡಿ ದುರ್ಗದ ದನಗಳನ್ನು ಹಿಡಿಯತಕ್ಕದ್ದು ಎಂದು ತನ್ನ ಕಡೆ ಮೊಖದುಂ

ಮುಸವನ ಕಣಮೆಯಲ್ಲಿ ದುರ್ಗದ ದನ ಹಿಡಿದದ್ದು.

ಸಾಬಿ, ಮೊಹದಿ೯ ಸಾಬಿ, ಇವರಿಗೆ ಬರೆದನು. ಅದರಂತೆ ಆ ಸರದಾರರು ಹೋಗಿ ಮುಸವನ ಕಣಮೆ ಬಳಿ ಮೆಯ್ಯುತಿದ್ದ ದುರ್ಗದ ಪಶುಗಳನ್ನು ಹಿಡಿದರು.

ಆ ದನಗಳನ್ನು ಕಾಯುತಾಇದ್ದ ಗೊಲ್ಲರವನು ದುರ್ಗಕ್ಕೆಹೋಗಿ

ಯುದ್ಧಕ್ಕೆಹೊರಟದ್ದು.

ದಕ್ಷಿಣ ಪ್ರಾಂತದ ಬಾತಮಿದಾರನ ಸಮೇತ ದೊರೆಯ ಸನ್ನಿಧಾನದಲ್ಲಿ ಈ ಸಂಗತಿಯನ್ನು ಅರಿಕೆ ಮಾಡಿದನು.

ಇದನ್ನು ಕೇಳಿದಕೂಡಲೆ ಮದಕರಿನಾಯಕನು ಅತ್ಯಂತವಾಗಿ ತಿಗ್ರಹಗೊಂಡು ತನ್ನ ಸೇನೆಯೊಡನೆ ಬಕ್ಷಿ ಚನ್ನಮಲ್ಲಯ್ಯನನ್ನು ಮುಂದಾಗಿ ಕಳುಹಿಸಿ ೧೦೦೦* ತೋಫ್‌ಖಾನೆ ಅದಕ್ಕೆ ತಕ್ಕದಂಡಿನೊಡನೆ ಹೋಗಿ ರೈಫಲ್ ಬಂದೂಖುಗಳು, ತೋಫುಗಳು ಎಲ್ಲವನ್ನೂ ಒಂದು ಉಸಿರಿಗೆ ಗೊಲಂದಾಸರ ಮೂಲಕ ಹತ್ತಿಸಿ ಕೊಂಬನ್ನು

* ಇದು ಅನುಮಾನವಾದರೂ ಪೂರ್ವದ ಪ್ರತಿಗಳಂತೆ ಇದೆ.

ಊದಿಸಿ ತಮಟೆಯನ್ನೂ ಭೇರಿಯನ್ನೂ ಹೊಡೆಯಿಸಿದನು. ಇದರ ಜೊತೆಗೆ ಸೇನೆಯವರ ಕೇಕೆಯೂ ಸೇರಿ ಏಕಕಾಲದಲ್ಲಿ ಬಹಳ ಸದ್ದಾದ್ದರಿಂದ ದನಗಳೆಲ್ಲಾ ಬೆದರಿ ಕೈಗೆ ಸಿಕ್ಕದೆ ದುರ್ಗದ ದಾರಿಯಲ್ಲಿ ಓಡಿಹೋದವು.

ಈ ಪ್ರಕಾರ ತಮ್ಮ ಕಾರ್ಯ ಭಂಗವಾಗಲು ಶತ್ರುಸೇನೆಯು ರೋಷದಿಂದ ಯುದ್ಧಕ್ಕೆ ಆರಂಭಮಾಡಿತು. ಇವರ ಪರಾಕ್ರಮ ಹೆಚ್ಚಿದ ಕಾರಣ ದುರ್ಗದ ದಂಡು ನಿಲ್ಲಲಾರದೆ ಹಿಂತಿರುಗುವಹಾಗಾಯಿತು. ಈ ಸ್ಥಿತಿಯನ್ನು ನೋಡಿ ಪಾಳಯಗಾರನು ರಣರಂಗದಲ್ಲಿ ನಿಂತು ತಮ್ಮ ಕಡೆಯವರಿಗೆ ಪ್ರೋತ್ಸಾಹಮಾಡಲಾಗಿ ಬೇಡರ ಸೈನ್ಯದವರು ಏಕಕಾಲವಲ್ಲಿ ಹಗೆಗಳಮೇಲೆ ತಿರುಗಿಬಿದ್ದು ಖಾಡಾಖಾಡಿ ಯುದ್ಧ ಮಾಡಿದರು.

ಹೈದರನ ಸೇನೆ ಸೋತದ್ದು.

ಹೈದರನ ಕಡೆಗೆ ಸೋಲಾಯಿತು, ಮೊಹದೀನಸಾಬಿ, ಮೊಖದುಂಸಾಬಿ ಇನ್ನೂ ಇತರ ಸೇನೆಯವರೂ ೧೦೦೦ ಕುದುರೆ ಮೊದಲಾದ್ದೆಲ್ಲಾ ದುರ್ಗದವರ ಕೈಗೆ ಸಿಕ್ಕಲಾಗಿ ಮದಕರಿನಾಯಕನಿಗೆ ಪೂರ್ತಿಯಾಗಿ ಜಯ ಉಂಟಾಯಿತು. ಈತನು ಬಹು ಅಟ್ಟಹಾಸದಿಂದ ರಾಜಧಾನಿಗೆ ಬಂದು ದೇವರುಗಳಿಗೆ ಸೇವೆಯನ್ನು ಮಾಡಿಸಿ ಬ್ರಾಹ್ಮಣ ಸಂತರ್ಪಣೆ ಮೊದಲಾದ್ದನ್ನು ಮಾಡಿಸಿ ದಾನಧರ್ಮಾದಿಗಳನ್ನು ಕೊಟ್ಟನು.

ಹೈದರನು ಭಾರಿಯುದ್ಧಕ್ಕೆ ಅನುವಾದ್ದು.

ಈ ಪ್ರಕಾರ ತಮ್ಮ ಕಡೆಯವರಿಗೆ ಅಪಜಯವಾದ್ದನ್ನು ಹೈದರನು ಕೇಳಿ ವಿಶೇಷವಾಗಿ ಕೋಪಗೊಂಡು ತನ್ನ ವಿಶಿಷ್ಟ ಸೈನ್ಯವೂ ದುರ್ಗದಮೇಲೆ ಹೊರಡಬೇಕೆಂದು ಅಪ್ಪಣೆ ಕೊಟ್ಟನು.

ಮಂತ್ರಿಗಳು ಹೈದರನಿಗೆ ಕೊಟ್ಟ ಸಲಹೆ.

ಆ ಸಮಯದಲ್ಲಿ ದಿವಾನ್ ಪೂರ್ಣಯ್ಯ, ತೋಷಿಖಾನೆ ಬಕ್ಷಿ ಕೃಷ್ಣರಾಯರು, ಬರಕಿ ಶ್ರೀನಿವಾಸರಾವ್, ಗುರಂಕೊಂಡೆ ಮೀರಾಸಾಹೇಬ ಮೊದಲಾದ ಸಾಮಾಜಿಕರು ಸೇರಿ ದೊಡ್ಡನವಾಬ ಹೈದರಲ್ಲಿಗೆ ಅರಿಕೆ ಮಾಡಿದ್ದೇನೆಂದರೆ :—

"ಖಾವಿಂದ್, ಹುಕ್ಕುಂ ಆದಮೇಲೆ ಶ್ರೀರಂಗಪಟ್ಟಣದ ಫೌಜು "ಹೋಗಿ ದುರ್ಗದಲ್ಲಿ ಠಾಣ್ಯಾಹಾಕಲು ಅಂತರವಿಲ್ಲ. ಆದರೆ ಚಿತ್ರದುರ್ಗದ "ರಾಜ ಬಲವಂತ, ಖಿಲ್ಲೆಯು ಬಹಳ ಕುಫುಲ್‌ಗಡವಾಗಿದೆ, ಅಲ್ಲಿ ಜಂಗಿ "ಸರಂಜಾಮು ಬಹಳವಾಗಿದೆ, ಬೆಟ್ಟದಮೇಲೆ ನೀರುವಗೈರೆ, ಆನು "ಕೂಲ್ಯ ಭಾರಿಯಾಗಿವೆಯಂತೆ, ಫೌಸು ಸಹಾ ಭಾರಿಯಾಗಿದೆ. ಇದೂ "ಅಲ್ಲದೆ ಶ್ರೀಮಂತರ ಕಡೆ ಪರಶುರಾಂ ಭಾವುಯವರ ಕುಮಕು ಪೂರಾ "ಇದೆ, ಮತ್ತು ಆ ಕೋಟೆಯಲ್ಲಿ ಮೆಃಖದುಂಸಾಹೇಬರು, ಮೊಹದ್ದಿ "ಸಾಬರು ಸೇರೆ ಸಿಕ್ಕಿದಾರೆ, ಉಪಾಯಮಾಡಿ ಇವರುಗಳನ್ನು ಈಚೆಗೆ "ಬರಮಾಡಿಕೊಳ್ಳಬೇಕು, ನಾವು ದುಡುಕದೆ ಸ್ವಲ್ಪ ಸಾಹಿತ್ಯಮಾಡಿ "ಕೊಂಡು ಚಿತ್ರದುರ್ಗದವರಿಗೆ ಶತ್ರುಗಳಾದ ಹರಪನಹಳ್ಳಿ, ರಾಯ "ದುರ್ಗ, ಈ ಸಂಸ್ಥಾನದ ಪಾಳಯಗಾರರ ಮೂಲಕ ಆ ಕೋಟೆಯ "ಭೇದವನ್ನು ತಿಳದುಕೊಂಡು ಮುತ್ತಿಗೆ ಹಾಕಿದರೆ ಖಿಲ್ಲೆ ಸ್ವಾಧೀನ "ವಾಗುವುದು."

ಹೀಗೆಂದು ಆ ಮಂತ್ರಿಗಳು ನವಾಬನಿಗೆ ಅರಿಕೆಮಾಡಿದರು. ಆಗ ಹೈದರನು ಇವರ ಮಾತು ಯುಕ್ತವೆಂದು ತಿಳದು ದುರ್ಗದ ದೊರೆಗೆ ಬರೆಯಿಸಿದ ಖರೀತದ ವಕ್ಕಣೆ ಹೇಗೆಂದರೆ :

ಹೈದರ ದುರ್ಗಕ್ಕೆ ಬರೆಯಿಸಿದ ಖರೀತ.

"ಶ್ರೀಮರ್ಮ ಮಹಾನಾಯಕಾಚಾರ್ಯನಾಯುಕ ಶಿರೋಮಣಿ ಕಾಮಗೇತಿ ಕಸ್ತೂರಿ ರಂಗಪ್ಪನಾಯಕ ರಾಜ ಮದಕರಿನಾಯಕ ರಾಜ, ಸಂಸ್ಥಾನ ಚಿತ್ರದುರ್ಗ, ದಾಂ ಮೊಹಬತ್ತುಹು.

ಅಜತರ್ಫ್ ನವಾಬ ಹೈದರಲ್ಲಿಖಾನ್ ಬಹಾದುರ್, ಸಂಸ್ಥಾನ ಶ್ರೀರಂಗಪಟ್ಟಣ—ಸಲಾಂ ಬಾದುಸಲಾಂ ಮೊಹವಲ್ ಮೊಕಷೂದ್ ಆಂಕಿ, ದರಿವಿಲ್ಲಾ, ಖಾಷ್ ಜಲೆಹಿಲಾಯಿ ವೈಶಾಖ ಶು॥ ೧೦ ಮೊಕ್ಕಾಂ ಶಿರಾದಲ್ಲಿ ಖುಷಿ, ಸಾಹೇಬ್ ತಮ್ಮ ಷಾದಮಾನಿದರ ಹಮೇಷ ಕೆಲಮು ಮಾಡಿ ಸುತಾಬರಬೇಕು.

ದಿಗರು —ನಮ್ಮ ಭಾವಮೈದುನರಾದ ಮೊಖದುಂ ಸಾಹೇಬರು, ೧೦೦೦೦ ಫೌಜುನಿಸಿ ಮತ್ತೋಡುಹಾಲಪ್ಪನಾಯಕರ ಮಾತಿನ ಮೇಲೆ ತಮ್ಮ ತುರುಗಳನ್ನು ಹಿಡಿದ್ದದರಿಂದ ತಮಗೆ ಕೋಪ ಬಂದು ಲಡಾಯಿ

ಮಾಡಲು, ಅವರು ಕೈಸೆರೆ ಸಿಕ್ಕಿದರಂತೆ, ಅವರು ನಮ್ಮ ಭಾವಮೈದುನರಲ್ಲ, ತಮ್ಮವರಾಗಿದಾರೆ. ನಮ್ಮ ನಿಮ್ಮ ಋಣಾನುಬಂಧ ಪೂರ್ವದಿಂದ ಸರಿಯಾಗಿ ನಡೆದು ಬರುತಿರಲಿಕ್ಕೆ ನಿಮ್ಮಿಂದಾ ಇಂಥಾದ್ದು ಬರಲಿಕ್ಕೆ ಇಲ್ಲ, ಸಾಹೇಬ ಮೌಸೂಫರಿಗೆ ಬಿಟ್ಟು ಕಳುಹಿಸುವಂತೆ ಮಾಡಿಸಬೇಕು."

ಹೀಗೆ ಬರೆದ ಪತ್ರವು ಹೈದರಲ್ಲಿಯಿಂದ ದುರ್ಗದ ದೊರೆಗೆ ಬಂದು ತಲಪಿತು. ಆಗ ಮದಕರಿನಾಯಕನು ದುರ್ಗದಲ್ಲಿ ಸೆರೆಯಲ್ಲಿದ್ದ ಮೊಖದುಂಸಾಬ್, ಮೊಹದೀನಸಾಬ್, ಎಂಬ ಹೈದರನ ಕಡೆಯ ಇಬ್ಬರು ಸರದಾರರನ್ನೂ ದರಬಾರಿಗೆ ಕರೆಯಿಸಿ ಮಾನವಾಗಿ ಕೂರಿಸಿ, ಅವರನ್ನು ಕುರಿತು—"ಸಾಹೇಬರೆ, ತಾವುಗಳು ದೊಡ್ಡಸರದಾರರಾಗಿದೀರಿ, ಜಯಾಪಜಯ ಯಾರಿಗೂ ಶಾಶ್ವತವಲ್ಲ, ಅದು ಈಶ್ವರಾಧೀನ, ನೀವು ಅಂದೇಶ ಮಾಡಬಾರದು, ಎಂದು ಸಮಾಧಾನ ಹೇಳಿ ಅವರಿಗೆ ಪಾಲಖಿ ಖಿಲ್ಲತ್ತು ಸಹಾ ಕೊಟ್ಟು ಅವರ ಅಂಗಸಂರಕ್ಷಣೆಗೆ ೫೦ ಕುದರೆಯೊಡನೆ ಅವರನ್ನು ಶ್ರೀರಂಗಪಟ್ಟಣಕ್ಕೆ ಕಳುಹಿಸಿದನು

ದುರ್ಗದ ದೊರೆಯು ಸೆರೆ ಸಿಕ್ಕಿದವರನ್ನು ಬಿಟ್ಟದ್ದು.

ಇಷ್ಟಾದರೂ ದುರ್ಗದವರು ಬಲಿಷ್ಠರೆಂದು ದೊಡ್ಡ ನವಾಬನಾದ ಹೈದರಲ್ಲಿಯೂ, ಹೈದರಲ್ಲಿ ಬಲವಾದ ಶತ್ರುವೆಂದು ಮದಕರಿನಾಯಕನೂ ತಂತಮ್ಮ ಮನಸ್ಸಿನಲ್ಲಿ ತಿಳದುಕೊಂಡೇ ಇದ್ದರು.

ಬಲವಂತನಾದ ಈ ಪಾಳಯಗಾರನನ್ನು ಹೇಗಾದರೂ ಮುರಿಯಬೇಕೆಂಬ ಕ್ರೋಧವನ್ನು ಹೈದರನು ಮರೆಯಲೇ ಇಲ್ಲ. ಏನ ಮರೆತರೂ ಶಿವನ್ನ ಮರೆಯೆ ಎಂದ ಹಾಗಾಗಿತ್ತು. ಹೈದರಲ್ಲಿಯು ಮದಕರಿನಾಯಕನನ್ನು ಭೇದೋಪಾಯಮಾಡಿ ಕರೆಯಿಸಿ ಅವನನ್ನು ಕೈಸೆರೆ ಹಿಡಿಯಬೇಕೆಂಬ ಆಶೆಯನ್ನು ಇಟ್ಟುಕೊಂಡೇ ಇದ್ದನು. ಇದಕ್ಕೋಸ್ಕರ ಪುನಃ ತನ್ನ ಭೇಟಿಗೆ ಬರಬೇಕೆಂದು ಪಾಳಯಗಾರನಿಗೆ ಕಾಗದ ಬರೆಯಿಸಿದನು. ಆದರೆ ಮದಕರಿನಾಯಕನು ಒಳತಂತ್ರವನ್ನು ಅರಿತು, ಹೈದರನ ಭೇಟಿಗೆ ಹೋಗದೆ ಏನಾದರೂ ಅನಿವಾರ್ಯವನ್ನು ಬರೆಯುತಾ ಕಾಲಹರಣ ಮಾಡುತಾ ಒಳಗೇ ಗುಟ್ಟಾಗಿ ಯುದ್ಧಸನ್ನಾಹವನ್ನು ಮಾಡಿಕೊಳ್ಳುತಾ, ಬಂದದ್ದೂ ಅಲ್ಲದೆ—

ಯುದ್ಧ ಸನ್ನಾಹ.

೫೦೦೦೦ ಕುದುರೆ ಅದಕ್ಕೆ ತಕ್ಕ ದಂಡೂ ಸಹಾ ತೆಗೆದುಕೊಂಡು ತನ್ನ ಸಹಾಯಕ್ಕೆ ಬರಬೇಕು, ಆ ಸೇನೆಯ ಖರ್ಚು ಏನಾದರೂ ತಾನೇ ಕೊಡುತೇನೆ ಎಂದು ಪೂನೆ ಶ್ರೀಮಂತರಿಗೂ ಪರಶುರಾಂಭಾವುಯವರಿಗೂ ನಾನಾ ಫರ್ಣವೀಸರಿಗೂ ಖರೀತಗಳನ್ನು ಬರೆಯಿಸಿ ರಾಯಭಾರಿಗಳ ಮೂಲಕ ಕಳುಹಿಸಿದನು. ಈ ವರ್ತಮಾನವನ್ನು ಹೈದರನ ಕಡೆಯವನಾಗಿ ದುರ್ಗದಲ್ಲಿದ್ದ ಅಂಚೆ ಮುತ್ಸದ್ದಿಯು ನವಾಬನಿಗೆ ಬರೆದು ಕಳುಹಿಸಿದನು.

ಹೈದರನು ಇದೆಲ್ಲವನ್ನೂ ತಿಳಿದು ಆಗ್ರಹಗೊಂಡು ಪುನಃ—ನೀವು ನಮ್ಮ ಭೇಟಿಗೆ ಬರಬೇಕು, ಹಾಗಿಲ್ಲವಾದರೆ ಸ್ನೇಹ ಅಭಿವೃದ್ಧಿಯಾಗುವುದಿಲ್ಲ ; ತಾವು ಬರುವುದಕ್ಕೆ ಮರ್ಜಿ ಇಲ್ಲವಾದರೆ ನಿಮ್ಮ ತಮ್ಮಂದಿರು ಪರಶುರಾಮಪ್ಪನಾಯಕರನ್ನೂ ಸಾಹೇಬ ಜಾದೆ ಭರಮಪ್ಪನಾಯಕರನ್ನೂ ಕೆಲವು ಫೌಜನ್ನೂ ಕಳುಹಿಸಬೇಕು, ಎಂದು ಖರೀತವನ್ನು ಕಳುಹಿಸಿದನು. ಆಗ ರಾಜಾಸಾಹೇಬನು—ನಾವೂ ಬರುವುದಿಲ್ಲ, ತಮ್ಮಂದಿರನ್ನೂ ಮಕ್ಕಳನ್ನೂ ಸಹಾ ಕಳುಹಿಸುವುದಿಲ್ಲ, ಗೋಲೀ ಸ್ನೇಹವೇ ಪರಂತು ಸುಸ್ನೇಹವಾಗುವುದಿಲ್ಲ ಎಂದು ಜವಾಬು ಕೊಟ್ಟು, ದುರ್ಗದ ಗುಟ್ಟನ್ನೆಲ್ಲಾ ನವಾಬನಿಗೆ ಬರೆದು ಕಳುಹಿಸುತಾ ಇದ್ದ ಅಂಚೆ ಮುತ್ಸದ್ದಿಯನ್ನು ಕೋಟೆಯಲ್ಲಿ ಸೆರೆ ಇಟ್ಟನು. ದುರ್ಗದಿಂದ ಶ್ರೀರಂಗಪಟ್ಟಣಕ್ಕೆ ಯಾವ ಸಮಾಚಾರವೂ ಬರಲಿಲ್ಲ. ಇದನ್ನು ತಿಳಿದು, ನವಾಬನು ಅನುಮಾನಪಟ್ಟು ೪೦೦೦೦ ದಂಡಿನೊಡನೆ ದುರ್ಗದ ಮೇಲೆ ಹೊರಟು ಯುದ್ಧಕ್ಕೆ ಅನುವಾದನು. ಆಗ ಮದಕರಿನಾಯಕನು ಮುಂದೆ ನಡೆಯಬೇಕಾದ ಯುದ್ಧಸಾಮಗ್ರಿಗಳೆಲ್ಲಾ ಸಿದ್ಧವಾಗಿದೆಯೇ ಎಂದು ವಿಚಾರಮಾಡಿ, ಎಲ್ಲವನ್ನೂ ಸಜ್ಜುಮಾಡಿಸಿದನು. ದೊರೆಯು ಮೊದಲು ಸೇನೆಯ ಸರದಾರರನ್ನೂ ಇತರ ಮಂತ್ರಿಗಳನ್ನೂ ಕರೆಯಿಸಿ ಹೈದರಲ್ಲಿಯ ಕಡೆಯಿಂದ ಒದಗಿಬಂದಿರುವ ರಾಜಕದ ವಿಚಾರವಾಗಿ ಆಲೋಚನೇ ಕೇಳಲು, ಅವರೆಲ್ಲರೂ ಒಂದೇ ರೀತಿಯಲ್ಲಿ—ನಮ್ಮ ಸೇನೆಯ ಪರಾಕ್ರಮವಾಗಲಿ ಯುದ್ಧಕ್ಕೆ ಬೇಕಾದ ಸಾಮಾನಾಗಲಿ ಯಾವುದೂ ಕಡಮೆಯಾಗಿಲ್ಲ, ಇದುವ

ದುರ್ಗದಲ್ಲಿ ಮಂತ್ರಾಲೋಚನೆ.

ಕೆಗೂ ಚಿತ್ರದುರ್ಗದ ದಂಡು ಸೋತುಹೋಯಿತೆಂದು ನಾವು ಕೇಳಿಲ್ಲ, ನವಾಬನು ಭಾರಿಯಾಗಿ ದಂಡು ತಂದಿದಾನೆ, ಆದರೆ ನಮಗೆ ಗಡಿದುರ್ಗ ಗಳ ಆಸರೆ ಇದೆ, ಅವನಿಗೆ ಮೈದಾನವಾಗಿದೆ, ಶ್ರೀಮಂತರ ಫೌಜು ನಮ್ಮ ಸಹಾಯಕ್ಕೆ ಬರುತಾ ಇದೆ, ನವಾಬನನ್ನು ಹೊಡೆದು ಶ್ರೀರಂಗಪಟ್ಟಣಕ್ಕೆ ಠಾಣ್ಯ ಹಾಕಲು ಅಂತರವಿಲ್ಲ, ಈ ಪ್ರಕಾರ ಅರಿಕೆ ಮಾಡಿದರು. ಇದೆ ಲ್ಲವನ್ನೂ ಕೇಳಿ ದೊರೆಯು ಸಂತೋಷಪಟ್ಟು ಅವರೆಲ್ಲರಿಗೂ ಕಡೆ ತೋಡೆವಸ ಮೊದಲಾದ್ದನ್ನು ಕೊಟ್ಟದ್ದಲ್ಲದೆ— ಲಡಾಯಿನಲ್ಲಿ ಮಡಿದವರ ಹೆಂಡರು ಮಕ್ಕಳಿಗೆ ಸಂಬಳಮಾಡಿರುತೇವೆ, ಕುದುರೆ ಬಿದ್ದವರಿಗೆ ಕುದು ರೆಕೊಡುತೇವೆ, ಶತ್ರುಜನರ ತಲೆತಂದವರಿಗೆ ದುರ್ಗಿ ೫೦ ವರಹ ಕೊ ಡುತೇವೆ. ಗೋಲಿಯಿಂದ ಹೊಡೆದವರಿಗೆ ೫ ರೂಪಾಯಿ ಕೋಟೆಮೇಲಿ ನಿಂದ ಗೋಲಿಹೊಡೆದವರಿಗೆ ಒಂದು ರೂಪಾಯಿ, ಬಹಲೆ ಭರ್ಜಿಯಿಂದ ಹೊಡೆದವರಿಗೆ ಕಾಲುಗಗ್ಗರ, ಜೋಮಾಲೆ, ಈ ಮೇರೆಗೆ ಇನಾಂಕೊಡು ತೇವೆ, ಎಂತ ದಂಡಿನವರಿಗೆಲ್ಲಾ ಪ್ರೋತ್ಸಾಹ ಕೊಟ್ಟು, ಕದನಕ್ಕೆ ಎಲ್ಲ ರಿಗೂ ವೀಳಯ ಕೊಟ್ಟು ದರಬಾರನ್ನು ಆ ದಿವಸ ನಿಲ್ಲಿಸಿದನು. ಪುನಃ ಮೂರನೇ ದಿವಸ—ದೇವಸ್ಥಾನಗಳಲ್ಲಿ ಅಭಿಷೇಕ, ಅರ್ಚನೆ ಮೊದ ಲಾದ ಸೇವೆ ನಡೆಯಲಿ, ಊರಲ್ಲಿ ತ್ರಿಮತಸ್ಥರಿಗೂ ಬ್ರಾಹ್ಮಣ ಸಂತರ್ಪಣೆ ನಡೆಯಲಿ ಎಂದು ಅಪ್ಪಣೆ ಮಾಡಿದನು. ಕೋಟೆ, ಚೌಕಿ ಮುಂತಾ ದೆಲ್ಲವನ್ನೂ ಬಂದೋಬಸ್ತುಮಾಡಿಸಿ ಬಕ್ಷಿ ಚನ್ನಮಲ್ಲಪ್ಪ ಮುಂತಾದ ವರು ಅರಿಕೇಮಾಡಿದ ತರುವಾಯ ಊರಲ್ಲಿರುವ ಸಾಹುಕಾರರು ಸೆಟ್ಟಿ

ಮುಖಂಡ ಜನರಲ್ಲಿ ಆಲೋಚನೆ.

ಮಹಾನಾಡು ಮುಂತಾದವರನ್ನು ಕರೆಯಿಸಿ ಅಪ್ಪ ಣೆಯಾದ್ದೇನೆಂದರೆ—"ಹೈದರಲ್ಲಿ ನವಾಬನು ಭಾರಿ ಯಾದ ದಂಡಿನೊಡನೆ ಚಿತ್ರದುರ್ಗದ ಮೇಲೆ ಬರು ತಾನೆಂದು ವರ್ತಮಾನಬಂದಿದೆ, ಅವನ ಮೇಲೆ ಯುದ್ಧಕ್ಕೆ ಹೊರಡಲು ಸಿದ್ಧವಾಗಿದೇವೆ, ನೀವು ಪೀಡಿದರ ಪೀಡಿಯಿಂದ ಈ ಪೂರಲ್ಲಿದ್ದವರು, ಇಂದಿನವರೆಗೂ ಶತ್ರುಗಳು ಯಾರೂ ಈ ಪೂರಿಗೆ ಬರಲಿಲ್ಲ, ನಿಮಗೆ ತೊಂದರೆ ಇರಲಿಲ್ಲ, ಈ ನವಾಬನು ಭಾರಿಯಾಗಿ ಸೇನೆಯನ್ನು ತಂದು ವೇದಾವತಿ ನದಿಯ ದಡದಲ್ಲಿಳಿದಿದಾನೆ, ನಾಲ್ಕೈದು ದಿವಸದಲ್ಲಿ ಇಲ್ಲಿಗೆ ಬರುತಾನೆ, ಭಾರಿಯಾಗಿ ಯುದ್ಧ ಜರುಗುವುದು, ಆದ್ದರಿಂದ ನಿಮ್ಮ

ಹೆಂಗಸರು ಮಕ್ಕಳು ದನಕರುಗಳು ಸಮೇತ ನೀವು ನಾಲ್ಕು ದಿವಸ ಹೊರಗೆ ಹೋಗಿ ಇರಬೇಕು, ದೇವರ ಕಟಾಕ್ಷದಿಂದ ನಮಗೆ ಜಯವಾದಮೇಲೆ ಎಂದಿನಂತೆ ಎಲ್ಲರೂ ಊರಿಗೆ ಬಂದಿರಬಹುದು,'' ಎಂದು ರಾಜನ ಅಪ್ಪಣೆಯಾಯಿತು. ಇದಕ್ಕೆ ಸೆಟ್ಟಿ ಚನ್ನಮಲ್ಲಪ್ಪನು –ಮಹಾರಾಜ ಸ್ವಾಮಿ, ಈ ಸಂಸ್ಥಾನಕ್ಕೆ ಹೆಸರಾದ ಸಾಹುಕಾರರು ಎಲ್ಲಿಗೆ ಹೋಗೇವು ? ನಾಲ್ಕುದಿಕ್ಕಿನಲ್ಲಿರುವ ಸಂಸ್ಥಾನವೆಲ್ಲಾ ಶತ್ರುಪಕ್ಷವಾಗಿದೆ, ನಾವುಎಲ್ಲಿಗೆ ಹೋದೇವು? ಪರದೇಶಕ್ಕೆ ಹೋಗಿ ಆ ರಾಜ್ಯದವರನ್ನು ಹೊಗಳಿ ಈ ರಾಜ್ಯವನ್ನು ನಿಂದಿಸತಕ್ಕವರ ಮಾತನ್ನು ಕೇಳಿಕೊಂಡು ನಾವು ಸುಮ್ಮನಿರುವುದಕ್ಕಾಗುವುದಿಲ್ಲ; ಈ ಪೂರಲ್ಲಿ ಜಲಬೇಕಾಷ್ಟಿದೆ, ಯುದ್ಧಸಾಮಗ್ರಿಯಂತೂ ವಿಶೇಷವಾಗಿದೆ, ಶತ್ರುಗಳ ಕಡೆಯಿಂದ ಏನಾದೀತು? ತಮ್ಮ ಪಾದವನ್ನು ಬಿಟ್ಟು ನಾವು ಹೊರಗೆ ಹೋಗಲಿಬಡಂಬಡುವುದಿಲ್ಲ, ಹೊರಗಿನ ಜನ ಎಷ್ಟು ತೋಫು ಹೊಡೆದಾಗ್ಯೂ ಗುಡ್ಡದ ಆಸರೆಯಿಂದ ಪ್ರಜೆಗಳಿಗೆ ಏನೂ ಆಗುವುದಿಲ್ಲ , ಈ ಊರು ಬಿಟ್ಟು ನಾವು ಎಲ್ಲಿಯೂ ಹೋಗುವುದಿಲ್ಲ, ಅಕ್ಕಿ, ಹುರಳಿ ಮೊದಲಾದ ಸಾಮಾನು ಹಿಂದೆ ಸೇರಿಸಿದ್ದು ಏನೂ ಕಡಮೆಯಾಗಿಲ್ಲ, ಖಜಾನೆ ಜಖೀರು ಕಡಮೆಯಾಗಿ ಸರ್ಕಾರಕ್ಕೆ ಅಗತ್ಯಬಿದ್ದರೆ ನಾವು ಇದ್ದು ಸಾರ್ಥಕವೇನು ? ಸ್ವಾಮಿಯವರ ದಂಡಿಗೆ ಒಂದು ವರುಷದ ಖರ್ಚನ್ನು ನಾವು ಕೊಡುತೇವೆ; ಇದಕ್ಕೆ ವಂಚನೆಇಲ್ಲ, ಈ ಪ್ರಕಾರಸೆಟ್ಟಿ ಚನ್ನಮಲ್ಲಪ್ಪ ವಿಜ್ಞಾಪಿಸಿದನು. ಆಗ ದೊರೆಯು ಸಂತೋಷಿಯಾಗಿ ಖಡೆ ತೊಡೆ ವಸ್ತ್ರ ಮುಂತಾದ್ದನ್ನು ಮಾನಾನು ಗುಣವಾಗಿತ್ತು ಅವರಿಗೆಲ್ಲಾವೀಳಯಕೊಟ್ಟು, ಅವರನ್ನು ಕುರಿತು—ಸರ್ಕಾರಕ್ಕೆ ಏನೂ ಕಮ್ಮಿ ಇಲ್ಲ, ನಿಮ್ಮಧೈರ್ಯನೋಡಲು ಕೇಳಿದೆವು, ನೀವು ಯಾವ ಅಂದೇಶವೂ ಪಡದೆ ಸ್ವಸ್ಥವಾಗಿ ನಿಂನಿಮ್ಮ ಮನೆಗಳಲ್ಲಿರಬಹು ಹೀಗೆಂದು ಹೇಳಿ ಅವರನ್ನು ಕಳುಹಿಸಿದನು.

ತರುವಾಯ ದೊರೆಯು ಕೋಟೆ, ಒತೇರಿ ಮುಂತಾದ್ದೆಲ್ಲವನ್ನೂ ಭದ್ರಮಾಡಿಸಿ ಅಲ್ಲಿ ಫಿರಂಗಿಗಳನ್ನು ಹೂಡಿಸಿದನು ; ಮತ್ತು ಎಲ್ಲವೂ ಸಿದ್ಧವಾಗಲು ದುರ್ಗದ ಕೋಟೆಯಮೇಲಿನಿಂದ ಏಕಕಾಲದಲ್ಲಿ ಬಾಣಗಳನ್ನೂ ಫಿರಂಗಿಗಳನ್ನೂ ಹತ್ತಿಸಿದರು. ಭಯಂಕರವಾಗಿ ಶಬ್ದವಾಯಿತು.

ಇದನ್ನೆಲ್ಲಾ ಕಂಡು ಶತ್ರುಗಳ ಸೇನೆಯವರು ದೂರವಾಗಿ ಓಡಿಹೋದರು. ಹೈದರನು ದುರ್ಬೀನು ಹಾಕಿ ನೋಡಿ ಕೋಟೆಯನ್ನು ಶ್ಲಾಘನೆ ಮಾಡಿ, ಹೇವಿಳಂಬಿ ಸಂ॥ ಆಷಾಢ ಶು॥ ೧೦ ಪ್ರಾತಃಕಾಲ ಮಲ್ಲಾಪುರದಬಳಿ ಡೇರೆ ಹಾಕಿಸಿಕೊಂಡು ನಿಂತನು. ಅವನ ಕಡೆ ಸೇನೆಯೆಲ್ಲಾ ದುರ್ಗದ ಹತ್ತಿರ ಬಂದು ಇಳಿಯಿತು. ನವಾಬನು—ಹರಪನಹಳ್ಳಿದಂಡು, ಮುರಗಿ ಮಠದ ಹತ್ತಿರ ಇಳಿಯಲಿ, ರಾಯದುರ್ಗದವರು ಬುದ್ಧಿವಂತನ ಮರಡಿಹತ್ತಿರ ಇಳಿಯಲಿ; ಅಗಸನ ಕಲ್ಲುದಿಂಣೆ, ಸಂತೆಬಾಗಿಲ ಎದುರು ದಿಂಣೆ, ವೆಂಕಟರಮಣಸ್ವಾಮಿ ಗುಡಿಯ ಮೈದಾನ, ರಂಗಯ್ಯನ ಬಾಗಿಲು ಎದುರಿಗೆ, ಬುದ್ಧಿವಂತನ ಮರಡಿಬಳಿಯಲ್ಲಿ, ಈಕಡೆಗಳಲ್ಲಿ ಮೋರ್ಚೆ ಕಟ್ಟಿಸಿ ಫಿರಂಗಿಗಳನ್ನು ಹೊಡಿಸತಕ್ಕದ್ದು; ನಮ್ಮ ಶ್ರೀರಂಗಪಟ್ಟಣದ ದಂಡಿನ ಸುತ್ತಲೂ ಗೊಡಬನ ಹಾಳು, ಗುಂಟನೂರು, ಜನಿಗೆ ಹಳ್ಳ, ಗೋಣೂರ ಕಣಿವೆ, ದೇವಮ್ಮನ ಹಳ್ಳಿಕಣಿವೆ, ಮೆದಕೆರಿಪುರ, ಕುಂಚಿಗನ ಹಾಳು, ಇಂಗಳದ ಹಾಳು, ಈ ಪ್ರಾಂತ ಕೆಲವು ದಂಡು ಇರತಕ್ಕದ್ದು. ಹೀಗೆಂದು ನೇಮಕಮಾಡಿ ಅಲ್ಲಲ್ಲಿ ಬೇಕಾದ ಸರದಾರರಿಗೆ ನೇಮಿಸಿದ್ದೂ ಅಲ್ಲದೆ, ದುರ್ಗದೊಳಕ್ಕೆ ಹೊರಗಿನಿಂದ ಯಾವ ಕೇಪು ಕಾಗದ ಪತ್ರಗಳೂ ಬಾರದಂತೆ ನೋಡಿಕೊಳ್ಳಲು ನೇಮಕಮಾಡಿದನು. ಯುದ್ಧಕ್ಕೆ ಎಲ್ಲಾ ಸಿದ್ಧವಾಯಿತು.

ಆಗ ನವಾಬನು ಘಟಕರಾದ ವಕೀಲರ ಮೂಲಕ ಮದಕರಿನಾಯಕನಿಗೆ ಕಡೇಸಾರಿ ಹೇಳಿ ಕಳುಹಿಸಿದ ಸಲಹೆಗಳು ಏನೆಂದರೆ—

**ಹೈದರನ ಕಡೆ ಕರೀತ.**

(೧) ಈಗಲಾದರೂ ನಮ್ಮ ಭೇಟಿಗೆ ಬರಬೇಕು.

(೨) ಇದುವರೆಗೆ ದಂಡಿಗೆ ಖರ್ಚಾದ ಆರು ಲಕ್ಷ ವರಹವನ್ನು ಕೊಡಬೇಕು.

(೩) ನಿಮ್ಮ ಅಣ್ಣತಮ್ಮಂದಿರ ಸಂಗಡ ಕೆಲವು ಸೇನೆಯನ್ನು ಕೊಟ್ಟು ಅವರು ಯಾವಾಗ್ಯೂ ನಮ್ಮಲ್ಲಿ ಇರುವಂತೆ ಕಳುಹಿಸಬೇಕು.

ಹೀಗಾದರೆ ಮುತ್ತಿಗೆಯನ್ನು ಬಿಟ್ಟು ದುರ್ಗದ ಸಂಸ್ಥಾನವನ್ನು ಉಳಿಸಿ ಹೊರಟು ಹೋಗುತ್ತೇವೆ, ಇಲ್ಲವಾದರೆ ಎರಡು ದಿವಸದಲ್ಲಿ ಕೋಟೆಯನ್ನು ಕಿತ್ತುಹಾಕಿ ಸಂಸ್ಥಾನವನ್ನು ತೆಗೆದುಕೊಳ್ಳುತ್ತೇವೆ.

ಹೀಗೆ ಹೈದರನು ಹೇಳಿ ಕಳುಹಿಸಿದನು. ಕ್ರಮಪ್ರಕಾರ ವಕೀಲರು ಬಂದು ಮದಕರಿನಾಯಕನಿಗೆ ಈ ಸಂಗತಿಯನ್ನು ದರಬಾರಿನಲ್ಲಿ ಅರಿಕೆ ಮಾಡಿದರು

## ಮದಕರಿನಾಯಕನ ತುಂಬಿದ ದರ್ಬಾರು.

ಮದಕರಿನಾಯಕನು ತುಂಬಿದ ದರಬಾರಿನಲ್ಲಿ ಕುಳಿತು, ಆ ವಕೀಲರು ಹೇಳಿದ ಸಂಗತಿಯನ್ನು ನಿಧಾನವಾಗಿ ಕೇಳಿ, ಉತ್ತರ ಹೇಳಿಕಳುಹಿಸಿದ್ದರ ಸಂಕ್ಷೇಪವೇನೆಂದರೆ—

" ಮೊದಲಿನಿಂದಲೂ ಹೈದರಲ್ಲಿಖಾನರ ಸ್ನೇಹವನ್ನು ಬೆಳೆಯಿಸಿ " ಬಂಕಾಪುರ, ನಗರ ಮೊದಲಾದ್ದನ್ನೂ ಮತ್ತು ಇತರ ಗಡಿ ದುರ್ಗಗ " ಳನ್ನೂ ಜೈಸಿಕೊಟ್ಟೆವು. ಇದಕ್ಕಾಗಿ ನವಾಬರು ನಮಗೆ ಏನೂ " ಕೊಡಲಿಲ್ಲ. ಇದಕ್ಕೆ ಬದಲಾಗಿ ಜಾನಕಲ್ಲು ಮೊದಲಾದ ಕೋಟೆಗ " ಳನ್ನು ಹಿಡಿದು ನಮ್ಮ ಪ್ರಜೆಗಳನ್ನು ಹಿಂಸಿಸಿದ್ದು ನಮಗೆ ಗೊತ್ತಾಗಿದೆ. " ಈಗ ನಮ್ಮ ಭೇಟಿ ಮಾಡಬೇಕೆಂದು ಅಪೇಕ್ಷಿಸುವ ಛದ್ಮನೆಯೂ " ನಮಗೆ ತಿಳಿಯಿತು. ಇಂಥಾ ತಂತ್ರದಿಂದ ಇತರ ಸಂಸ್ಥಾನಗಳನ್ನು " ನವಾಬರು ತೆಗೆದುಕೊಂಡ ಅಂಶವನ್ನು ನಾವು ಬಲ್ಲೆವು. ಅವರು " ತಮ್ಮ ಧಣಿಯನ್ನು ವಶಮಾಡಿಕೊಂಡು ಅವರನ್ನು ಉದ್ಧಾರಮಾಡಿ " ದಾರೆ. ಅವರ ಸಂಸ್ಥಾನವೇನಾಯಿತು? ಒಳಗೆ ವಿಷವನ್ನು ಕಟ್ಟಿ " ಕೊಂಡು ಮೇಲೆ ಮಧುರವಾದ ಮಾತನಾಡಿದರೆ ನಾವು ಹೇಗೆ ಭೇಟಿ " ಕೊಟ್ಟೇವು? ಲಡಾಯಿನಲ್ಲಿ ಭೇಟಿ ಯಾಗುತ್ತೆ.

" ತಮ್ಮ ಪರಶುರಾಮಪ್ಪ ಮತ್ತು ಸಾಹೇಬಜಾದೇರು ಲಡಾಯಿಗೆ " ನಿಂತಿರುವಾಗ ಅವರು ಹೇಗೆ ಬಂದಾರು? ಮುಂದಕ್ಕೆ ಮುಂದಕ್ಕೆ " ಲಡಾಯಿ ಹೊರತು ಸ್ನೇಹವಿಲ್ಲ.

" ಆರು ಲಕ್ಷವರಹ ಕೊಡಲು ಕಾರಣವಿಲ್ಲ, ನವಾಬರಿಗೆ ನಾವೇ " ನೂ ಔತನ ಕೊಟ್ಟಿರಲಿಲ್ಲ, ಅವರು ನಮಗೆ ಸಹಾಯಕ್ಕಾಗಿ ಏನೂ

"ಬಂದಿಲ್ಲ, ನಮ್ಮ ಮನೆಯನ್ನು ತೆಗೆದುಕೊಳ್ಳಲು ಸೇನೆಯೊಡನೆ ಬಂದ
"ವರಿಗೆ ನಾವು ಖರ್ಚು ಕೊಡಲು ಆಗಲಾರದು.

"ನಮ್ಮ ಖಿಲ್ಲೆಯನ್ನು ಎರಡು ದಿವಸದಲ್ಲಿ ತೋಫಿನಿಂದ ಹಾರಿಸಿ
"ಬಿಡುವುದಾಗಿ ಹೇಳುತಾರೆ. ಅವರ ಕೈಲಾದ್ದನ್ನು ಮಾಡಬಹುದು.
"ಈ ಕೋಟೆಯನ್ನು ಮೇಣದಲ್ಲಿ ಮಾಡಿಲ್ಲ. ಅದನ್ನು ಉರುಟಿಸುವು
"ದಕ್ಕೆ ಯಾರಿಂದಲೂ ಆಗಲಾರದು.

"ನಮ್ಮ ದೌಲತ್ತನ್ನು ಬಹಲು ಮಾಡುವುದಕ್ಕೆ ಅದನ್ನು ನಮಗೆ
"ಯಾರೂ ಕೊಟ್ಟಿಲ್ಲ. ಅದನ್ನು ನಮಗೆ ಕೊಟ್ಟ ಈಶ್ವರ ದೊಡ್ಡವನು
"ಜಯಾಪಜಯ ಇಂಥವರದೆಂದು ಹೇಳಲು ಆಗಲಾರದು. ಹೇಗಾ
"ದರೂ ಭಾರಿ ದಂಡಿನೊಡನೆ ಬಂದಿದೀರಿ. ಲಡಾಯಿ ಆಗುತ್ತೆ. ಹೀಗಿ
"ರುವಲ್ಲಿ ಸ್ನೇಹವಾಗಲಾರದು."

ಈ ಪ್ರಕಾರ ದೊರೆಯು ಜವಾಬು ಹೇಳಿ ವಕೀಲರಿಗೆ ಸನ್ಮಾನ ಮಾಡಿ ಕಳುಹಿಸಿ ತರುವಾಯ ದುರ್ಬೀನಿನಿಂದ ಹೈದರನ ಸೇನೆಯ ಸ್ಥಿತಿ ನೋಡಿತಿಳಿದುಕೊಂಡನು.

---

## ೧೯ ನೇ ಅಧ್ಯಾಯ.

### ಕಡೇ ಮದಕರಿನಾಯಕ—ದುರ್ಗದ ಮುತ್ತಿಗೆ.

ಹೈದರನ ದಂಡಿನವರು ಕೋಟೆಯನ್ನು ಮುತ್ತಿದರು. ಹೋರಾಟ ಬಲವಾಯಿತು. ಹೈದರನ ಕಡೆಯವರು ಏಟ ತಡೆಯಲಾರದೆ ಸೋತು ಓಡಿಹೋದರು. ಹೀಗೆ ಎರಡು ತಿಂಗಳು ಕಳೆಯಿತು. ದುರ್ಗದವರೇ ಜೈಸುತಾ ಬಂದರು. ಆಗ ನವಾಬನು ಕೇವಲ ಖಿನ್ನನಾಗಿ ತನ್ನ ಕಡೆಯ ಫರಾಸಿಸರ ಸೇನಾಪತಿಯಾದ ಲಾಲಿ ಮೊದಲಾದ ಸರದಾರರನ್ನು ಕರೆಯಿಸಿ ಅವರನ್ನು ಪ್ರೋತ್ಸಾಹ ಮಾಡಿ ನಮಗೆ ಒಂದು ಲಡಾಯಿನಲ್ಲಿಯೂ ಜಯವಾಗಲಿಲ್ಲ. ಕೋಟೆ ಬಹು ಬಲವಾದ್ದು. ಪಾಯಿನ ಖಿಲ್ಲೆ ಪೇಟೆಗೆ ಮಾತ್ರ ಬಂದು

ಮುತ್ತಿಗೆಗೆ ಆರಂಭ.

ಸೀಸೀರು ಹೊಂಡವಿದೆಯಂತೆ, ಅದನ್ನು ಹಿಡಿದು ಬಿಟ್ಟರೆ ನಮಗೆ ಅನುಕೂಲವಾಗುತ್ತೆ ಎಂತ ಹೇಳಿದನು. ಆಗ ಲಾಲಿಯು ತನ್ನ ತುಕಡಿಯವರನ್ನೂ ೧೦ ತೋಫನ್ನೂ ತೆಗೆದುಕೊಂಡುಹೋಗಿ ಚೋಳು ಗಟ್ಟದ ಮರೋಲಿಯಿಂದ ಕೋಟೆಗೆ ಪಶ್ಚಿಮ ದಿಕ್ಕಿನಲ್ಲಿರುವ ಬರಗೇರಮ್ಮನ ದೇವಸ್ಥಾನದ ಮೇಲುಗಡೆ ಇರುವ ಕೋಟೆಗೆ ೧೦ ತೋಫಿನಿಂದಲೂ ಹೊಡೆಯುತಾ ಬಂದನು. ಅದರ ಕೆಳಗಿನ ಕಂದಕ ಸಂಣದಾದಕಾರಣ ಕೋಟೆಗೋಡೆ ಜಗ್ಗಿಹೋಯಿತು. ಆಗ ಹೈದರನೂ ಹರಪನಹಳ್ಳಿ ಬಸಪ್ಪನಾಯಕ, ರಾಯದುರ್ಗದ ಕೃಷ್ಣಪ್ಪನಾಯಕ, ಇನ್ನೂ ಇತರ ಸರದಾರರೂ ಸಹ ೩೦೦೦೦ ದಂಡಿನೊಡನೆ ಬಂದು ಬಿದ್ದು ಹೋದ ಕೋಟೆಯಮೇಲಕ್ಕೆ ಹತ್ತುತಾಬಂದರು. ಇದು ತಿಳಿದಕೂಡಲೆ ಮದಕರಿ ನಾಯಕನು ತಾನೇ ಬಂದು, ವ್ಯಾಸರಾಯಮಠದ ಬಳಿಯಲ್ಲಿ ಕೂತು, ಕೋಟೆ ಮೇಲಕ್ಕೆ ಹತ್ತಿ ಹತ್ತಿ ಬರುತಾ ಇದ್ದವರ ತಲೆಯನ್ನು ಹೊಡೆಯಿಸುತಾ ಬಂದನು. ಸಾವಿರಾರುಜನ ಹತವಾಯಿತು ಉಭಯ ಸೇನೆಯಲ್ಲಿಯೂ ೨೦೦೦ ದೊಡ್ಡ ದೊಡ್ಡ ಸರದಾರರು ಸತ್ತು ಬಿದ್ದರು. ಹೈದರನು ಈ ಖಿಲ್ಲೆಯನ್ನು ಹಲ್ಲಾ ಮಾಡಲು ಆಗುವುದಿಲ್ಲ. ಇನ್ನು ಹಲ್ಲಾ ಮಾಡಲು ಯತ್ನಿಸುವದಿಲ್ಲವೆಂದು ತನ್ನ ದಂಡಿಗೆ ಹೊರಟು ಹೋದನು. ದೊರೆಯು ಅಲ್ಲಿ ಕೋಟೆಯನ್ನು ಭದ್ರಮಾಡಿಸಿ ಅರಮನೆಗೆ ಬಂದು ತಮಗೆ ಜಯವಾದ್ದಕ್ಕೆ ದೇವರುಗಳಿಗೆ ಬೇಕಾದ ಸೇವೆಗಳನ್ನೂ ಬ್ರಾಹ್ಮಣಸಂತರ್ಪಣೆ ಮುಂತಾದ್ದನ್ನೂ ಮಾಡಿಸಿದನು. ದುರ್ಗದ ಉತ್ಸವಾಂಬಸಿಗೆ ಉತ್ಸವಾದಿಗಳನ್ನು ಮಾಡಿಸಿ ರಣಭೇರಿಯನ್ನು ಹೊಡೆಯಿಸುತಾ ಇರುವಾಗ, ಜನರು ವೀರಾವೇಶದಿಂದ ಹೋಗಿ ಶತ್ರುಗಳ ೨೦೦—೩೦೦ ಶಿರಸ್ಸುಗಳನ್ನು ತಂದು ದೊರೆಗೆ ನಿವಾಳಿಹಾಕುತಾ ಇದ್ದರು. ಹೀಗೆ ಆಗಾಗ್ಗೆ ೨ ತಿಂಗಳವರೆಗೂ ನಡೆಯಿತು. ಅಲ್ಲಲ್ಲಿ ಪುನಃ ಪುನಃ ಘೋರವಾಗಿ ಕೋಟೆಯೊಳಗಿನವರಿಗೂ ಹೊರಗಿನವರಿಗೂ ಯುದ್ಧ ನಡೆಯುತಾ ಜನ ಬಹಳ ನಷ್ಟವಾಯಿತು. ಇಂಥಾ ಚಿಕ್ಕ ಚಿಕ್ಕ ಕದನಗಳು ನಡೆಯುತಾ ಇನ್ನೂ ಒಂದು ತಿಂಗಳು ಕಳೆಯಿತು.

ಹೈದರನ ಯತ್ನಸಾಗಲಿಲ್ಲ.

ಒಂಟಿ ಶೂರಗುದಗತ್ತಿ.

ಈ ಸಂದರ್ಭದಲ್ಲಿ ವೀರಪ್ರತಾಪವನ್ನು ತೋರಿಸಿದ ಬಂದು ಸಂಗತಿ ಜರುಗಿತು. ಬುದ್ಧಿವಂತನ ಮರಡಿಕಡೆ ಮೊಹರ್ಚೆಯನ್ನು ಸರಿಮಾಡಿಸಿ ಹೈದರನ ಕಡೆ ಮುತ್ತಿಗೆ ಸೇನೆಯನ್ನು ಅಲ್ಲಿ ಬಲಮಾಡಿಸಲು ಹೈದರನ ಕಡೆಯ ಒಬ್ಬ ಸರದಾರನು ಪಾಲಕಿಯಲ್ಲಿ ಕೂತು ಛತ್ರಚಾಮರದೊಡನೆ ಮಿತ ಪರಿವಾರಯುಕ್ತನಾಗಿ ಹೋಗುತಿರಲು, ರಂಗಯ್ಯನ ಬಾಗಿಲಕೋಟೆ ಮೇಲಿದ್ದ ದೊರೇ ತಮ್ಮ ಪರಶುರಾಮಪ್ಪನಾಯಕನು ಆ ಪಾಲಕಿಯಲ್ಲಿ ಹೋಗುತಿದ್ದವನು ಹೈದರನೆಂದು ಭ್ರಮಿಸಿ—ನವಾಬ ಹೋಗುತಾ ಇದಾನೆ, ಅವನ ಫೌಜಿನ ಮೇಲೆ ಹೋಗಿ ಅವನನ್ನು ಹೊಡೆದು ಬರುವ ವೀರರು ಯಾರಿದಾರೆ ನಮ್ಮ ದಂಡಿನಲ್ಲಿ? ಎಂದು ಮಾಕರಿಸಿ ಕೇಳಿದನು. ಆಗ ಸಮೀಪದಲ್ಲಿದ್ದ ಸಿಪಾಯಿ ಗುದಗತ್ತಿ ಎಂಬುವನು ಅದನ್ನು ಕೇಳಿ—ಬುದ್ಧಿ, ತಮ್ಮ ಭವಾನಿಯೆಂಬ ಕುದುರೆಯನ್ನೂ ತಮ್ಮ ಕತ್ತಿಯನ್ನೂ ಕೊಟ್ಟರೆ ನಾನು ಹೋಗಿ ಆ ಪಲ್ಲಕ್ಕಿಯಲ್ಲಿರುವ ನವಾಬನ ತಲೆಯನ್ನು ಕತ್ತರಿಸಿ ಬರುತೇನೆಂದು ಹೇಳಿದನು. ಅದರಂತೆ ಒಪ್ಪಿ ಪರಶುರಾಮಪ್ಪನಾಯಕನು ಕತ್ತಿಯನ್ನೂ ಕುದುರೆಯನ್ನೂ ಕೊಡಲು, ಆ ಗುದಗತ್ತಿ ಎಂಬ ವೀರನು ಆ ಕುದುರೆಯನ್ನು ಏರಿ ಕತ್ತಿಯನ್ನು ಹಿಡಿದು ಭರ್‍ರನೆ ಹೋಗಿ ಆದಂಡಿನೊಳಗೆ ನುಗ್ಗಿ ಪಲ್ಲಕ್ಕಿಯಲ್ಲಿ ಹೋಗುತಿದ್ದ ಸರದಾರನ ತಲೆಯನ್ನು ಕತ್ತರಿಸಿ ಪುನಃ ಹಿಂತಿರುಗಿ ಬಂದನು. ಆದರೆ ಆ ಸರದಾರನ ಸಂಗಡ ಹೋಗುತಿದ್ದ ದಂಡಿನವರು ಇವನನ್ನು ಹರಿಸಿಕೊಂಡು ಹೊಡೆಯುತಾಬಂದರು. ಅಷ್ಟರಲ್ಲಿ ಕೋಟೆ ಮೇಲಿನಿಂದ ಫಿರಂಗಿ ಹಾರಿಸಿ ಆ ಜನರನ್ನು ಓಡಿಸಿದರು. ಪರಶುರಾಮಪ್ಪನಾಯಕನು ಆ ಒಂಟಿ ಶೂರನನ್ನು ನೋಡಿ ಬಹಳ ಸಂತೋಷಪಟ್ಟನು.

ಪೂನೆ ಜಾಸೂದರನ್ನು ಹೈದರ ಹಿಡಿಸಿದ್ದು.

ಹೀಗೆ ಯುದ್ಧ ಜರುಗುತಾ ಇರುವಲ್ಲಿ ಇಬ್ಬರು ಜಾಸೂದರ ವೇಷಾ ಹಾಕಿಕೊಂಡು ದುರ್ಗದ ಸಮೀಪಕ್ಕೆ ಬರುತಿದ್ದರು. ಇವರನ್ನು ನವಾಬರ ಕಡೆ ಬಾತಮಿ ಕುದುರೆಯವರು ಹಿಡಿದು ಹೈದರಲ್ಲಿಯ ಸಮೀಪಕ್ಕೆ ಕರೆದು ತಂದರು. ಇವರ ಅಂಗಶೋಧನೆ ಮಾಡುವಾಗ, ಅವರಲ್ಲಿ ಬಂದು

ಕಾಗದ ಸಿಕ್ಕಿತು. ಅದನ್ನು ಒಡೆದು ನೋಡಿದರು, ಅದು ಮದುಕರಿ ನಾಯಕನಿಗೆ ಪೂನೆ ಶ್ರೀಮಂತರು ಬರೆದ ಕಾಗದವಾಗಿತ್ತು. ಅದರಲ್ಲಿ "ನಿಮ್ಮ ಸಹಾಯಕ್ಕೆ ಗೋಪಾಲಹರಿ ಎಂಬ ಸರದಾರರ ಸಂಗಡ "೫೦೦೦೦ ಕುದುರೆ ತೋಫುಖಾನೆ ಮುಂತಾದ್ದನ್ನು ಕಳುಹಿಸಿದೆ, ತಾವು "ಗಾಬರಿಯಾಗಬೇಕಾದ್ದಿಲ್ಲ. ಹೈದರಲ್ಲಿಯನ್ನು ಹೊಡೆಯುತಾ ಇರು "ವುದು. ನಮ್ಮ ಫೌಜು ಬಂದಮೇಲೆ ನೀವೂ ಅವರೂ ಕೂಡಿ ಹೈದ "ರಲ್ಲಿಯನ್ನು ಹಿಡಿದು ಪೂನೆಗೆ ಕಳುಹಿಸಬೇಕು" ಹೀಗೆಂದು ಬರೆದಿತ್ತು. ಇದನ್ನು ನೋಡಿಕೊಂಡು ಹೈದರನು ಇದುವರೆಗೂ ನಮಗೆ ಜಯವಾಗಿಲ್ಲ. ಮರಾಟೆಯವರೂ ಬಂದು ನಮ್ಮ ಮೇಲೆ ನಿಂತರೆ ನಾವು ಸೋಲುವುದೇ ಖಂಡಿತ. ಈಗ ನಾವು ದುರ್ಗದವರಲ್ಲಿ ರಾಜಿಮಾಡಿಕೊಂಡು ಇವರಿಂದ ಬಂದ ಹಣವನ್ನು ಮರಾಟೆಯವರಿಗೆ ಕೊಟ್ಟುಬಿಟ್ಟರೆ ಅವರು ಹೊರಟುಹೋಗುತಾರೆ. ತರುವಾಯ ನಾವು ಏಕಾ ಏಕಿ ಬಂದು ಈ ಕೋಟೆಯನ್ನು ಹಿಡಿದುಕೊಳ್ಳಬಹುದು, ಎಂದು ಪರ್ಯಾಲೋಚಿಸಿ ದುರ್ಗದ ದೊರೆಗೆ ಒಂದು ಕಾಗದವನ್ನು ಬರೆಯಿಸಿದನು. ಅದರ ಮುಖ್ಯಸಾರಾಂಶವೇನೆಂದರೆ.—

ಹೈದರನ ಕುಪಟ್ಯ

"ತಮ್ಮ ಸಿಪಾಯಿಗಿರಿಯನ್ನು ನೋಡಿ ಬಹಳ ಸಂತೋಷವಾ "ಯಿತು. ತಮ್ಮನ್ನು ಪರೀಕ್ಷಿಸಲು ಬಂದೆವು, ತಮ್ಮ ಮನೆಯನ್ನು ತೆಗೆ "ಕೊಳ್ಳಲು ಬರಲಿಲ್ಲ, ತಮ್ಮ ಮರ್ದುಮಿ, ತಮ್ಮ ಲಡಾಯಿ, ತಮ್ಮ ಪರಾ "ಕ್ರಮವನ್ನು ನೋಡಿ ಬಹಳ ಸಂತೋಷಪಟ್ಟೆವು. ಇತಃಪರ ಸ್ನೇ "ಹವೇ ಹೊರತು ಜಿದ್ದುಮಾಡುವುದಿಲ್ಲ. ಇಂಥಾ ಲಡಾಯಿ ಮಾಡಿದವ "ರನ್ನು ನಾನು ಎಲ್ಲಿಯೂ ನೋಡಲಿಲ್ಲ. ಈಗಲೂ ೯೦೦೦೦೦ ವರಹ "ಖಂಡಣಿ ಕೊಟ್ಟುನಿಮ್ಮತಮ್ಮಂದಿರಿಗೆ ಕಳುಹಿಸಿದರೆ ನಾವು ಕೂಚುಮಾ "ಡಿ ಹೊರಟು ಹೋಗುತೇವೆ"—ಹೀಗೆಂದು ಆ ಖರೀತದಲ್ಲಿ ಬರೆದಿತ್ತು.

ಮದಕರಿನಾಯಕನು ಇದನ್ನು ನೋಡಿಕೊಂಡು ತನ್ನ ಕಡೇ ದೊಡ್ಡ ಮಂತ್ರಿಗಳನ್ನೂ ಸರದಾರರನ್ನೂ ಕರೆಯಿಸಿ ಆಲೋಚನೆ ಮಾಡಲಾಗಿ, ಆ ದೊಡ್ಡಮನುಷ್ಯರು. ನಮಗೆ ಸಹಾಯವನ್ನು ಕಳುಹಿಸಬೇಕೆಂದು ನಾವು

ದುರ್ಗದವರು ಕರಾರಿಗೆ ಒಪ್ಪಲು ಸಲಹೆ.

ಪೂನೆಗೆ ಬರೆದು ೭ ತಿಂಗಳಾಯಿತು. ಬರೀ ಉತ್ತರಬಂತೇ ಹೊರತು ಸಹಾಯಕ್ಕೆ ಸೇನೆ ಬರಲಿಲ್ಲ, ಇದುವರೆಗೆ ನಮಗೇ ಜಯವಾಗಿದೆ, ಭಾರಿ ಸರದಾರರು ಸತ್ತುಹೋದರು. ಈಗ ಶತ್ರುಗಳೇ ರಾಜಿಗೆ ಬಂದಿದಾರೆ, ಖಂಡಣಿ ಹಣವನ್ನು ಕೊಟ್ಟುಬಿಟ್ಟರೆ, ಅವರು ಮುತ್ತಿಗೆ ಬಿಟ್ಟು ಹೊರಟು ಹೋಗುತಾರೆ, ಆ ಮೇಲೆ ಅಂಥಾ ರಾಜಕಾರ್ಯಬಿದ್ದರೆ ಪರಶುರಾಂಭಾವು ಯವರ ಲಷ್ಕರನ್ನು ಕರೆಯಿಸಿಕೊಂಡು ನಾವು ನಿಲ್ಲಬಹುದು. ಈಗ ರಾಜಿ ಮಾಡಿಕೊಳ್ಳುವುದೇ ಯುಕ್ತವಾಗಿ ಕಾಣುತ್ತೆ, ಎಂದು ಅರಿಕೆಮಾಡಿದರು.

ಇದನ್ನು ಕೇಳಿ ದೊರೆಯು ಹೈದರನ ಕಡೆ ವಕೀಲರನ್ನು ಕುರಿತು— “ನವಾಬರ ಸಲಹೆ ವಿಚಾರವನ್ನು ನಮ್ಮ ಸರದಾರರಿಗೆ ತಿಳಿಸಿದೆವು. ಗಳಿಗೆಗೆ ಸ್ನೇಹ, ಗಳಿಗೆಗೆ ದ್ವೇಷ ಮಾಡುವುದು ನವಾಬರ ಸ್ವಭಾವವಾಗಿದೆ, ಒಂದಕ್ಕೆ ಎರಡರಷ್ಟು ಸೇನೆತಂದು ಹನ್ನೆರಡು ವರುಷ ಮುತ್ತಿಗೆ ಹಾಕಿದರೂ ನಮಗೆ ಭಯವಿಲ್ಲ ಈಗಲೂ ನವಾಬರ ಮರ್ಜಿ ಖಾಯಂ ಇದ್ದಲ್ಲಿ ಶ್ರೀರಂಗಪಟ್ಟಣದ ಸಾಹುಕಾರ ಅಂದಾನ ಸೆಟ್ಟಿ, ರಾಘವೇಂದ್ರ ನಾಯಕ, ಶಂಕರಸೆಟ್ಟಿ, ಇವರ ಮೂಲಕ ಪ್ರಮಾಣ ಪೂರ್ವಕವಾಗಿ ಪತ್ರಬರೆದರೆ, ನಾವು ರಾಜಿಗೆ ಒಪ್ಪುತ್ತೇವೆ. ಆ ಸಾಹುಕಾರರ ಮೂಲಕ ಖಂಡಣಿ ಕೊಡುತ್ತೇವೆ. ನವಾಬರು ಕೂಚು ಮಾಡಿ ಹೊರಟು ಹೋಗಬೇಕು.” ಹೀಗೆಂದು ಪಾಳಯಗಾರನು ಆ ವಕೀಲರಿಗೆ ತಿಳಿಸಿದನು. ಆ ಮಾತಿಗೆ ಹೈದರಲ್ಲಿಯೂ ಒಪ್ಪಿ ಆ ಮೂರು ಜನ ಸಾಹುಕಾರರಿಂದ ಪತ್ರ ಬರೆಯಿಸಿ ಕೊಟ್ಟನು. ಅದನ್ನು ನಂಬಿ ಪಾಳಯಗಾರನು ನವಾಬನಿಗೆ ೬೦೦೦೦೦ ವರಹವನ್ನು ಕೊಟ್ಟು ಕಳುಹಿಸಿದನು. ಪರಶುರಾಮಪ್ಪನಾಯಕರಿಗೆ ಅಪ್ಪಣೆಕೊಟ್ಟು ಫೌಜು ಸಮೇತ ಹೈದರನ ಬಳಿಗೆ ಕಳುಹಿಸುವುದಕ್ಕಾಗಿ ತಕ್ಕ ಪ್ರಯತ್ನಮಾಡುವಷ್ಟರಲ್ಲಿ ಮುಂದಿನ ಕೆಲಸ ಜರುಗದಹಾಗೆ ಮತ್ತೊಂದು ಕಾರ್ಯ ನಡೆಯಿತು.

ಪೂನೆ ಕರೀತ ದುರ್ಗಕ್ಕೆ ತಲಪಿದ್ದು.

ಈ ಸಮಯದಲ್ಲಿ ಪೂನೇದಿಂದ ಒಂದು ಪತ್ರ, ಗೋಪನಹರಿ ಸರದಾರನಿಂದ ಒಂದು ಪತ್ರ, ವಕೀಲ ಪುರುಷೋತ್ತಮ ಪಂತನಿಂದ ಒಂದು ಪತ್ರ, ಹೀಗೆ ಮೂರು ಪತ್ರಗಳನ್ನೂ ಜಾಸೂದು ವೇಷಧಾರಿಗಳು ತಂದು ಗುಟ್ಟಾ

ಗಿ ದುರ್ಗದ ದೊರೆಗೆ ತಿಳಿಸಿದರು. ಶ್ರೀಮಂತರ ದಂಡು ಕೃಷ್ಣಾನದಿ ಬಿಟ್ಟು ಕಪೋತನ ಗುಡ್ಡದ ಹತ್ತಿರ ಇಳಿದಿರುವುದಾಗಿಯೂ, ಅದು ಎಂಟು ದಿವಸಕ್ಕೆ ಬರುವುದೆಂತಲೂ ತಿಳಿಯಿತು. ಆಗ ಮದಕರಿನಾಯಕನು ಸಂತೋಷಪಟ್ಟು, ಕರಾರಿನ ಪ್ರಕಾರ ಹೈದರನ ಪಾಳಯಕ್ಕೆ ಭಾರಿ ಸೇನೆಯೊಡನೆ ಹೋಗಲು ಕೋಟೆಯ ಹೊರಭಾಗದಲ್ಲಿ ಸಿದ್ಧನಾಗಿದ್ದ ತಮ್ಮನಾದ ಪರಶುರಾಮಪ್ಪನಾಯಕನನ್ನು ಹೋಗಬೇಡವೆಂದು ಹಿಂತಿರುಗಿ ಕರೆಯಿಸಿ, ಶ್ರೀರಂಗಪಟ್ಟಣದ ಸಾಹುಕಾರರಿಗೂ ಏನೋ ನೆಪಹೇಳಿಕಳುಹಿಸಿದನು. ನವಾಬನು ಈ ವಾಸನೆಯನ್ನು ಹೇಗೆಯೋ ತಿಳಿದುಕೊಂಡು ಮರಾಟೆಯವರ ಸರದಾರ ಗೋಪಾಲಹರಿಯ ಹತ್ತಿರಕ್ಕೆ ಹೋಗಿ ಅವನೊಡನೆ ಯುದ್ಧವನ್ನು ಮಾಡಿ ಕಡೆಗೆ ರಾಜಿಮಾಡಿಕೊಂಡು ಹತ್ತು ಲಕ್ಷ ವರಹ ಖಂಡಣಿಯನ್ನು ಶ್ರೀಮಂತರಿಗೆ ಕೊಟ್ಟು ಗೋಪಾಲಹರಿಯ ದಂಡು ಹಿಂತಿರುಗಿ ಹೋಗುವಹಾಗೆ ಮಾಡಿ ನವಾಬನು ಅಲ್ಲಿ ಮೊಕ್ಕಾಂ ಮಾಡಿಕೊಂಡಿದ್ದನು.

ಸಹಾಯಕ್ಕೆ ಬಂದ ಪಾಳೆಯಗಾರರ ಸೇನೆಯನ್ನು ದುರ್ಗದಿಂದ ಕಳುಹಿಸಿಬಿಟ್ಟದ್ದು

ದುರ್ಗದ ಪಾಳಯಗಾರನು ಯುದ್ಧ ನಿಂತಿತೆಂದು ತಿಳಿದು, ತನ್ನ ಸಹಾಯಕ್ಕೆ ಬಂದಿದ್ದ ಕನಕಗಿರಿ, ಆದವಾನಿ, ಜರಿಮಲೆ, ಮೊದಲಾದ ಸಂಸ್ಥಾನಗಳ ದಂಡು, ಮತ್ತು ಇತರ ಗಡಿಗಳ ದಂಡು, ಇವುಗಳನ್ನು ಅವರವರ ಸ್ಥಳಕ್ಕೆ ಕಳುಹಿಸಿ ಬಿಟ್ಟನು. ಹೀಗೆ ಮಾಡಿದ್ದು ಒಂದು ತಪ್ಪು. ದೂರದೃಷ್ಟಿ ಇಲ್ಲದ ಕೆಲಸವಾಯಿತು. ಹಾಲಪ್ಪನಾಯಕ ಓಡಿಹೋದನು. ಮದಕರಿನಾಯಕನು ಎಂದಿನಂತೆ ದರಬಾರು

ನಗರದ ಇರಸಾಲು.

ಮಾಡಿಕೊಂಡಿರಲಾಗಿ ಶ್ರೀರಂಗಪಟ್ಟಣಕ್ಕೆ ನಗರದಿಂದ ೩೦೦೦೦೦೦ ವರಹ ಇರಸಾಲು ಹೋಗುತಾ ಇದೆ ಎಂದು ಕೇಳಿ ಅದನ್ನು ಹಿಡಿಯಲು ತಾನೇ ಸೇನೆಯನ್ನು ತೆಗೆದುಕೊಂಡು ಹೋದನು. ಆ ಹಣವು ಇವನಿಗೆ ಸಿಕ್ಕದೆ ಹೊರಟುಹೋಯಿತು. ಆಗ ಪಾಳಯಗಾರನು ದುರ್ಗಕ್ಕೆ ಹಿಂತಿರುಗಿ ಬರುತಾ ಇದಾನೆಂಬ ವರ್ತಮಾನವನ್ನು ಕೇಳಿ ಅವನನ್ನು ದುರ್ಗಕ್ಕೆ ಬರದಂತೆ ಮಧ್ಯಮಾರ್ಗದಲ್ಲಿ ತಡೆಯಬೇಕೆಂದು ಹೈದರನು ತನ್ನ ಮಗ ಟೀಪುಸುಲ್ತಾನ

ನನ್ನು ೨೦೦೦೦ ಕುದುರೆಯೊಡನೆ ಕಳುಹಿಸಿದನು. ಟೀಪು ಅಲ್ಲಿಗೆ ಹೋಗುವುದರೊಳಗಾಗಿ ಮದಕರಿನಾಯಕನು ದುರ್ಗಕ್ಕೆ ಬಂದು ಬಿಟ್ಟನು.

ಹೀಗೆ ತನ್ನ ಪ್ರಯತ್ನ ಭಗ್ನವಾದ್ದನ್ನು ತಿಳಿದು ಹೈದರನು ತನ್ನ ಮಂತ್ರಿಗಳಾದ ಪೂರ್ಣಯ್ಯ, ಕೃಷ್ಣರಾವ್, ಬರಕಿ ಶ್ರೀನಿವಾಸರಾವ್ ಮೊದಲಾದ ಮೀರ್ ಮೀರಾಗಳನ್ನು ಆಲೋಚನೆ ಕೇಳಲಾಗಿ ಅವರು ಹೇಳಿದ್ದೇನೆಂದರೆ :

ಹೈದರನ ಕಡೆಯವರ ಮಂತ್ರಾಲೋಚನೆ

"ಏಕಾ ಏಕಿ ದುರ್ಗಕ್ಕೆ ಮುತ್ತಿಗೆ ಹಾಕಿದರೆ ಅದು ಸಾಧ್ಯವಾಗು "ವುದಿಲ್ಲ. ಅದನ್ನು ಭೇದೋಪಾಯದಿಂದಲೇ ಗೆಲ್ಲಬೇಕು. ಆ ಸೀಮೆ ಸುತ್ತಲೂ ಇರುವ ಗಡಿಗಳಲ್ಲವನ್ನೂ ನಾವು ತೆಗೆದುಕೊಂಡು ನಮ್ಮ ಸ್ವಾ "ಧೀನದಲ್ಲಿಟ್ಟುಕೊಂಡರೆ, ಹೊರಗಿನ ಫೌಜು ದುರ್ಗದವರಿಗೆ ಬರಲು "ಮಾರ್ಗವಿರುವುದಿಲ್ಲ. ಆಯಾ ಗಡಿಗಳಲ್ಲಿರುವ ಜನರಿಗೆ ಭಾರಿಸಂಬಳ "ವನ್ನೂ ಇನಾಮನ್ನೂ ಸಹಾ ಕೊಟ್ಟು ನಮ್ಮ ಕಡೆಗೆ ತಿರುಗಿಸಿಕೊಳ್ಳ "ಬೇಕು. ಮತ್ತು ದುರ್ಗದಲ್ಲಿ ಮುಸಲ್ಮಾನರು ದೊಡ್ಡಸರದಾರರಾಗಿದಾರೆ. "ಅವರನ್ನು ನಮ್ಮ ಕಡೆಗೆ ಸೆಳೆದುಕೊಳ್ಳಬೇಕು. ದುರ್ಗದವರಿಗೆ ಪರ "ಶುರಾಂಭಾವುವಿನ ಸಹಾಯ ಬಂದು ಮಾತ್ರ ಇರುತ್ತೆ. ತುಂಗಭದ್ರಾ "ನದಿಯ ಹತ್ತಿರ ೨೦೦೦೦ ದಂಡು ಇಡಿಸಿದರೆ, ಮರಾಟೆ ದಂಡು ಬರುವು "ದನ್ನು ತಡೆಯಬಹುದು ಎಂದಿದ್ದರೂ ದುರ್ಗದ ಸೀಮೆ ನಮ್ಮ ಕೈಗೆ "ಸಿಕ್ಕುವುದು ಖಂಡಿತ, ಪಾಳಯಗಾರ ಮಾತ್ರ ನಮ್ಮ ಕೈಗೆ ಜೀವ "ಸಹಿತ ಸಿಕ್ಕುವನಲ್ಲ, ಜಾತಿ ಸಿಪಾಯಿಯಾಗಿದಾನೆ. ಅವನು ಯುದ್ಧ "ದಲ್ಲಿ ಮಡಿಯುವುದು ಖಂಡಿತ," ಎಂಬದಾಗಿ ಹೈದರನ ಮಂತ್ರಿಗಳು ಅರಿಕೆ ಮಾಡಿದರು.

ದುರ್ಗಕ್ಕೆ ಎರಡನೇ ಸಾರಿ ಮುತ್ತಿಗೆ.

ಆಗ ಹೈದರಲ್ಲಿಯು ಪುನಃ ಭಾರಿ ಸೇನೆಯೊಡನೆ ಬಂದು ದುರ್ಗದ ಕೋಟೆಗೆ ಮುತ್ತಿಗೆ ಹಾಕಿದನು. ಕೋಟೆಯ ಸಮೀಪದಲ್ಲಿ ಬಂದು ಲಕ್ಷ ಫೌಜು ಜಮಾಯಿಸಿತು. ಕೋಟೇ ಮೇಲಕ್ಕೆ ಹಲ್ಲು ಹತ್ತತಕ್ಕ ಶತ್ರುಗಳನ್ನು ಪಾಳಯಗಾರನು ತನ್ನ ದಂಡಿನೊಡನೆ ಕತ್ತರಿಸಿ ಹಾಕಿಸುತ್ತಲೇ ಬಂದನು.

ಹಗೆಗಳಿಗೆ ಸ್ವಲ್ಪವೂ ಆಸ್ಪದ ಕೊಡಲಿಲ್ಲ, ಅನೇಕ ಜನ ಸತ್ತುಹೋಯಿತು. ಕಂದಕವೆಲ್ಲಾ ಹೆಣದಲ್ಲಿ ಮುಚ್ಚಿಹೋಯಿತು. ನವಾಬನ ದಂಡು ಕೋಟೇಮೇಲಿನ ಏಟನ್ನು ತಡೆಯಲಾರದೆ ಹಿಂತೆಗೆಯಿತು. ಎಷ್ಟು ಗುಂಡು ಹೊಡೆದರೂ ಕೋಟೆ ಜಗ್ಗಲಿಲ್ಲ. ಆ ಕೋಟೆಯನ್ನೂ ಅಲ್ಲಿನ ಜನರ ಪೌರುಷವನ್ನು ನೋಡಿ ಹೈದರನು ಆಶ್ಚರ್ಯಪಡುತಾ ಭೇದೋಪಾಯಮಾಡಿ ಈ ಕೋಟೆಯನ್ನು ಗೆಲ್ಲಬೇಕೆಂದು ಆಲೋಚಿಸಿ ಬೇರೊಂದು ವಿಧವಾದ ಯತ್ನವನ್ನು ಹೂಡಿದನು.

ಈ ಕದನಗಳಲ್ಲಿ ತಮ್ಮ ದೊರೆಗೆ ಜಯವಾಗಲೆಂದು ವಿಶಿಷ್ಟ ಜನರೂ ಶತ್ರುಗಳನ್ನು ಎದುರಿಸಲು ಉದ್ಯುಕ್ತರಾದರು. ಸ್ತ್ರೀಜನರುಕೂಡ ತಮ್ಮ ಪರಾಕ್ರಮವನ್ನು ತೋರಿಸುತಾ ಬಂದರು. ಈ ವಿಚಾರವನ್ನು ಕುರಿತು ಹಳೇ ಬಖೈರುಗಳಲ್ಲಿ ಏನೂ ಬರೆಯದೇ ಇದ್ದಾಗ್ಯೂ, ಚಿತ್ರದುರ್ಗದಲ್ಲಿಯೂ ಮತ್ತು ಇತರ ಕಡೆಯಲ್ಲಿಯೂ ಪರಂಪರೆಯಾಗಿ ಜನವಾರ್ತೆಯಾಗಿ ಬಂದಿರುವ ಮತ್ತು ದುರ್ಗದ ಕೋಟೆ ಕಲ್ಲಿನಮೇಲೆ ಈಗಲೂ ಪ್ರತಿಮೆ ಕೆತ್ತಿ ಗುರುತುಮಾಡಿರುವ ಶ್ಲಾಘ್ಯತರವಾದ ಕೆಲವು ಸಂಗತಿಗಳನ್ನು ಇಲ್ಲಿ ಬರೆಯತಕ್ಕದ್ದು ಆ ಪ್ರಾಂತದ ಜನರ ಪರಾಕ್ರಮಕ್ಕೆ ನ್ಯಾಯವಾದ ಗೌರವವನ್ನು ತೋರಿಸಿದಂತೆ ಆಗುವುದು.

ಓಬವ್ವನ ಪರಾಕ್ರಮ.

ಈ ಕೋಟೆಯೊಳಕ್ಕೆ ಮತ್ತು ದುರ್ಗದೊಳಕ್ಕೆ ಹೋಗಲು ಹೈದರನ ಕಡೆಯವರಿಗೆ ಎಲ್ಲಿಯೂ ದಾರಿಸಿಕ್ಕಲಿಲ್ಲ. ಕೋಟೆಯನ್ನು ಒಡೆಯುವುದು ಅತ್ಯಂತ ಶ್ರಮ. ಒಂದು ವೇಳೆ ಅದನ್ನು ಒಡೆದು ಒಳಕ್ಕೆ ನುಗ್ಗಲು ಸಾಹಸಮಾಡಿಯಾರೆ, ಕೋಟೇಮೇಲಿನಿಂದ ಬೀಳುವ ಏಟು ಕೋಟೆಗೋಡೆಯ ಸಮೀಪಕ್ಕೆ ಯಾರೂ ಹೊದದ್ದಹಾಗೆ ಮಾಡತಕ್ಕಂಥಾದ್ದು. ಒಂದು ವೇಳೆ ಹೊರಕೋಟೆಯನ್ನು ಹಲ್ಲಾ ಮಾಡಿ ತೆಗೆದುಕೊಂಡಾರೆ, ಪುನಃ ಮತ್ತೊಂದು ಕೋಟೆಬತೇರಿ ಮೊದಲಿಗಿಂತಲೂ ಹೆಚ್ಚಾದ ತೊಂದರೆಯನ್ನು ಕೊಡತಕ್ಕಂಥಾದ್ದು. ಹೀಗೆ ಬೆಟ್ಟದ ಮೇಲೆ ಬೆಟ್ಟ, ಕೋಟೇ ಮೇಲೆ ಕೋಟೆ, ಇರತಕ್ಕದ್ದನ್ನು ಹಿಡಿದು ತೆಗೆದುಕೊಳ್ಳೋಣವೆಂದರೆ, ಯಾವಕಡೆಯೂ ದಾರಿಯೇ ಸಿಕ್ಕದು. ಇದನ್ನು ಜೈಸುವುದು ಹೇಗೆ? ಭೇದೋಪಾಯ

ಮಾಡಿಯೇ ಇದನ್ನು ಸ್ವಾಧೀನ ಮಾಡಿಕೊಳ್ಳಬೇಕೆಂದು ಹೈದರನು ಖಂಡಿತಮಾಡಿಕೊಂಡು ಇದರ ಶೋಧನೆಗಾಗಿ ಜನಗಳನ್ನೂ ಸೇನೆಯನ್ನೂ ಬಿಟ್ಟನು. ಈ ಕೆಲಸಕ್ಕಾಗಿ ಬೇಹುಗಾರರು ವೇಷವನ್ನು ಮರೆಯಿಸಿಕೊಂಡು ಬೆಟ್ಟದ ಸುತ್ತಲೂ ಸುತ್ತುತಾ ಇರುವಾಗ, ದೂರದಲ್ಲಿ ಒಬ್ಬ ಹೆಂಗಸು ಮಡಕೆಯಲ್ಲಿ ಮೊಸರನ್ನು ತೆಗೆದುಕೊಂಡು ಬೆಟ್ಟದ ಕಡೆಗೆ ಹೋಗುತಾ ಒಂದು ಬಂಡೆಯ ಸಂದಿನಲ್ಲಿ ನುಸುಳಿ ಕೋಟೆಯೊಳಕ್ಕೆ ಸೇರಿ ಬೆಟ್ಟದಮೇಲಕ್ಕೆ ಹೋದಳಂತೆ. ಈ ಸುಳುವನ್ನು ತಿಳಿದುಕೊಂಡು ಹೈದರನ ಸೇನೆಯವರು ಆಕಡೆ ಕೋಟೆಗೆ ಏಣಿ, ಉಡು, ಮೊದಲಾದ್ದನ್ನು ಹಾಕಿ ಹಲ್ಲಾ ಹತ್ತಿದರು. ಎರಡು ಪಕ್ಕದಲ್ಲಿಯೂ ಮೇಲೂ ಕೆಳಗೂ ಸಹಾ ಬಂಡೆ ಇರುವ ಒಂದು ಸಂಣ ಸಂದು ಕಾಣಿಸಿತು. ಆ ಸಂದಿನೊಳಗೆ ಗಾಢಾಂಧಕಾರವಾಗಿತ್ತು. ಅದರೊಳಕ್ಕೆ ಒಬ್ಬ ಮನುಷ್ಯಮಾತ್ರ ಹೊಟ್ಟೆಯನ್ನು ಕೆಳಗೆ ಹಾಕಿ ಈಜಿಕೊಂಡು ಹೋಗುವಹಾಗಿತ್ತು. ಈ ಕಳ್ಳದಾರಿಯನ್ನು ಗೊತ್ತುಮಾಡಿಕೊಂಡು ಶತ್ರುಗಳು ಒಬ್ಬೊಬ್ಬರಾಗಿ ಒಳಕ್ಕೆ ನುಗ್ಗುವ ಪ್ರಯತ್ನಮಾಡುತಿದ್ದರು. ಈ ದಾರಿಯ ಸಮೀಪದಲ್ಲಿ ಒಂದು ಸೀನೀರಿನ ಕೊಳವಿತ್ತು.

ಅರ್ಧ ಬೆಟ್ಟದಲ್ಲಿ ಕಹಳೆಯವನ ಬತೇರಿ ಎಂದು ಒಂದು ಎತ್ತರವಾದ ಗುಂಡು ಜಗಲಿ ಬತೇರಿ ಇದೆ. ಕಹಳೆಯವನು ಅದರ ಮೇಲೆಯೂವಾಗಲೂ ಇರುತಾ, ಆ ಎತ್ತರವಾದ ಸ್ಥಳದಿಂದ ಸುತ್ತಲೂ ನೋಡುತಾ, ಹೆಚ್ಚುಗಟ್ಟಲೆ ನಡೆದದ್ದು ದೂರದಲ್ಲಿ ಕಂಡು ಬಂದರೆ, ಮತ್ತು ದೊರೆಯ ಸವಾರಿ ಹೊರಕ್ಕೆ ಹೊರಟರೆ, ತನ್ನ ಕೊಂಬನ್ನು ಊದಿ ಎಚ್ಚರಿಕೆಯನ್ನು ಕೊಡುವ ವಾಡಿಕೆ ಇತ್ತು. ಮಹಾ ಘೋರವಾಗಿ ಯುದ್ಧ ನಡೆಯುತಾ ಇರುವಾಗ ಈ ಕಹಳೆಯವನ ಕೆಲಸ ಹೆಚ್ಚಾಗಿಯೇ ಇತ್ತು. ಒಂದು ದಿನ ಇವನು ತನ್ನ ಚಾಕರಿಮಾಡಿದ ತರುವಾಯ ಆ ಗುಡ್ಡದಲ್ಲಿಯೇ ಇದ್ದ ತನ್ನ ಗುಡಿಸಲಿಗೆ ವೂಟಕ್ಕಾಗಿ ಬಂದನು. ಇವನ ಹೆಂಡತಿಯಾದ ಓಬಿ ಎಂಬ ಹೆಂಗಸು ತನ್ನ ಗಂಡನಿಗೆ ಬಡಿಸಿ ಅವನು ಹಿಟ್ಟನ್ನು ಉಂಣುತಾ ಇರುವಾಗ ನೀರತರಲು ಗಡಿಗೆ ಹಿಡಿದು ಕಳ್ಳದಾರಿಯ ಬಳಿಯಲ್ಲಿರುವ ಕೊಳದ ಹತ್ತರಕ್ಕೆ ಹೋದಳು. ಆಗ ಗವಿಯೊಳಗೆ ಕಂಡಿ

ಯ ಚಕೋರಿಯಲ್ಲಿ ಜನದ ಸಪ್ಪಳವಾಯಿತು. ಇದೇನೆಂದು ಗವಿಯೊಳಕ್ಕೆ ಹೋಗಿ ನೋಡಿದಳು. ಕಳ್ಳಗಂಡಿಯ ಹೊರಗಡೆ ಜನದ ಗಲಗಾಯಿತು. ಶತ್ರುಗಳು ಕೋಟೆಯೊಳಕ್ಕೆ ನುಗ್ಗಲು ಯತ್ನಮಾಡುತಾ ಇದಾರೆಂದು ತಿಳಿದು ತನ್ನ ಗುಡಿಸಲಿಗೆ ಓಡಿಹೋಗಿ ಒಂದು ವನಕೆಯನ್ನು ತೆಗೆದು ಕೊಂಡು ಬಂದು ಕತ್ತಲೆಯಾಗಿದ್ದ ಆ ಕಳ್ಳಗಂಡಿಯಪಕ್ಕದಲ್ಲಿ ನಿಂತಳು. ಆ ಕಂಡಿಯಿಂದ ಒಬ್ಬ ಸಿಪಾಯಿ ನುಸುಳಿಕೊಂಡು ಬಂದ. ಓಬಿಯು ತನ್ನ ಕೈ ವನಕೆಯಿಂದ ಅವನ ತಲೆಯಮೇಲೆ ಹೊಡೆದು ಕೊಂದು ಹಾಕಿದಳು. ಹೆಣ ಹಳ್ಳಕ್ಕೆ ಬಿತ್ತು. ಇನ್ನೊಬ್ಬ ಅದೇ ಕತ್ತಲೇ ಸಂದಿನಲ್ಲಿ ನುಗ್ಗಿಬಂದ. ಅವನಿಗೂ ಅದೇಗತಿಯಾಯಿತು. ಮತ್ತೊಬ್ಬ ಬಂದ, ಮಗದೊಬ್ಬಬಂದ. ಹೀಗೆ ೨೦೦-೩೦೦ ಜನದವರೆಗೂ ಒಬ್ಬೊಬ್ಬರಾಗಿ ಬಂದರು. ಒಬ್ಬೊಬ್ಬರನ್ನಾಗಿಯೇ ಓಬಿಯು ಹೊಡೆಯುತಾ ಬಂದಳು. ಹೆಣದರಾಸಿ ಬಿತ್ತು. ರಕ್ತಗುಂಡಿ ಕಟ್ಟಿತು. ಕಳ್ಳಗನ್ನದಿಂದ ಒಳಕ್ಕೆ ಹೋದವರು ಏನಾದರೆಂಬುವುದು ಹೊರಗಿದ್ದ ದಂಡಿನವರಿಗೆ ತಿಳಿಯಲಿಲ್ಲ. ಕಡೆಗೆ ಬಹಳ ಹೊತ್ತಾಯಿತು. ಕೊಂಬಿನವನು ಚಾಕರಿಗೆ ಹೋಗಲು ಹೊತ್ತುಮೀರಿತು. ಅವನು ಹೆಂಡತಿಯನ್ನು ಹುಡುಕಿ ಕೊಂಡು ಬಂದು ನೋಡುವಾಗ ವಿರಾವೇಶದಿಂದ ಪ್ರಜ್ಞೆ ತಪ್ಪಿ ಓಬಿಯು ಗಂಡನನ್ನೂ ಹೊಡೆಯುವುದಕ್ಕೆ ಬಂದಳು. ಅಷ್ಟರೊಳಗೆ ಹೊರಗಡೆ ಶತ್ರುಗಳ ದಂಡಿನವರು ಹೇಗೆಯೋ ಕೋಟೇಮೇಲಕ್ಕೆ ಹತ್ತುತಿದ್ದರು. ಇದನ್ನು ಓಬಿಯ ಗಂಡನು ಕಂಡು ಕೊಂಬನ್ನು ಊದಿದನು. ಈ ಸಂಗತಿ ದೊರೆಗೆ ತಿಳಿಯಿತು. ಅವನೂ ಸೇನೆಯೂ ಆಸ್ಥಳಕ್ಕೆ ಬಂದು ಆ ಹಗರಣವನ್ನು ನೋಡಿ ಆ ಹೆಂಗಸಿನ ಪರಾಕ್ರಮುವನ್ನೂ ಸಾಹಸವನ್ನೂ ಕೊಂಡಾಡಿದರು. ಅಷ್ಟರೊಳಗೆ ಶತ್ರುಗಳ ಭಟರು ಒಳಕ್ಕೆ ಬಂದು ಓಬಿಯನ್ನು ಕಡಿದು ಹಾಕಿದರು. ಈ ಕನ್ನಗಂಡಿಯ ಕಳ್ಳದಾರಿಯ ರಹಸ್ಯವನ್ನು ಪೂರ್ವದಲ್ಲಿ ತಿಳಿದುಕೊಂಡಿದ್ದ ರಾಯದುರ್ಗದವರ ಸೇನೆಯು ಒಳಕ್ಕೆ ನುಗ್ಗಿಬಂದಿತ್ತು. ಮದಕರಿನಾಯಕನೂ ಸೇನೆಯೂ ಸಹಾ ಈ ಶತ್ರುಸೇನೆಯನ್ನು ಕಡಿಯಲು ಆರಂಭಿಸಿದರು. ರಾಯದುರ್ಗದ ಹೇಡಿಗಳು ಬಾಯಲ್ಲಿ ಕಡ್ಡಿಕಚ್ಚಿಕೊಂಡು ಶರಣಾಗತರಾದರು. ಅವ

ರನ್ನು ಬಿಟ್ಟು ಉಳಿವ ಸೇನೆಯನ್ನು ದುರ್ಗದ ವೀರರು ಕಡಿದುಹಾಕಿದರು. ಕೋಟೆಯ ಹೊರಗಿದ್ದವರು ಓಡಿಹೋದರು. ಈ ಓಬಿಯು ಮಾಡಿದ ಮಹತ್ತರವಾದ ಕಾರ್ಯವನ್ನು ನೋಡಿದರೆ ಸಾಕ್ಷಾತು ಮಹಾ ದುರ್ಗಿಯು ಅವತಾರವೋ ಎನ್ನುವಹಾಗಿತ್ತು. ಇವಳು ದುರ್ಗಕ್ಕೆ ಸಮೀಪದಲ್ಲಿರುವ ಅಗಸನಕಲ್ಲು ಗ್ರಾಮದವಳು. ಇವಳ ವಂಶೀಯರು ಆವೂರಲ್ಲಿ ಈಗಲೂ ಇದಾರೆಂದು ಹೇಳುತಾರೆ.

ತುರುಕರೊಡನೆ ಹೈದರನ ಪಿತೂರಿ.

ಇದುವರೆಗೆ ಹೈದರನಿಗೆ ಯಾವದಿಕ್ಕಿನಲ್ಲಿಯೂ ಜಯವಾಗದಿರಲು ಮತ್ತೊಂದು ಉಪಾಯುವನ್ನು ಹೂಡಿದನು. ದುರ್ಗದ ದೊರೆಯ ಸೇನೆಯಲ್ಲಿಯೂ ಇತರ ಇಲಾಖೆಗಳಲ್ಲಿಯೂ ಅನೇಕ ಮುಸಲ್ಮಾನರು ಉದ್ಯೋಗಗಳನ್ನು ಮಾಡಿಕೊಂಡಿದ್ದರು. ಅಂಥಾ ಕುತಬಂದಿಖಾ಼ ಮುಂತಾದ ಜನರನ್ನು ತಮ್ಮಕಡೆಗೆ ತಿರುಗಿಸಿಕೊಳ್ಳುವುದಕ್ಕಾಗಿ ಫಿತೂರಿಮಾಡಬೇಕೆಂದು ಖಾಜಿ ಅಷರಫ್‌ಖಾನರಿಗೆ ನವಾಬಹೇಳಿದನು. ಅದರಂತೆ ದುರ್ಗದಲ್ಲಿ ಮುಖಂಡ ಮುಸಲ್ಮಾನರಾಗಿದ್ದ ಕುತಬಂದಿಖಾ, ಅಹಮ್ಮದ್‌ಖಾ, ಜಮಾಲ್‌ಖಾ, ಇವರನ್ನು ಕರೆಯಿಸಿ—ನಾವು ಆಹಲೆ ಇಸಲಾಂಜನ, ಹಿಂದೂ ಮುಸಲ್ಮಾನರಿಗೆ ದ್ವೇಷವಿದ್ದೇಇದೆ, ಇನ್ನು ಎಲ್ಲಿಯೂ ಮಾರ್ಗವಿಲ್ಲದ್ದರಿಂದ, ಈ ಪಾಳಯಗಾರನಲ್ಲಿ ಚಾಕರಿಗೆ ಸೇರಬೇಕಾಯಿತು, ಮೊದಲಿನಿಂದಲೂ ಹಿಂದುಗಳನ್ನು ಮುರಿದು ದೀನ್‌ದಾರ್ ಜನರು ಪ್ರಬಲವಾಗುತಾ ಬರುತಿದಾರೆ, ಹಿಂದೂ ಜನರ ಉಪ್ಪುತಿಂದು ಷಹೀದು ಆದರೆ ದೋಜಕು ಶಿವಾಯಿ ಅನ್ಯಥಾ ಇಲ್ಲ. ಈ ಗರೀಬ ಪಾಳಯಗಾರ ಏನು ಕೊಟ್ಟಾನು, ನವಾಬ ಸಾಹೇಬರು ಜಹಗೀರಿ ಕೊಡುವ ಮನ್‌ಸಬು ಮಾಡಿದಾರೆ, ಈ ಸಂಸ್ಥಾನ ಬಂದು ಠಾಣೆಬಿದ್ದರೆ, ಮಕ್ಕಾ, ಮದೀನ, ಅರಬಸ್ಥಾನ್, ಕಾಬೂಲ್, ಖಂದಾರೆ ಸೀಮೆ ಸೇರಿ ಎಲ್ಲಾ ಮುಸಲ್ಮಾನರದಾಗುತ್ತೆ. ನೀವು ದೀನ್‌ದಾರರಾದರೆ ಇದಕ್ಕೆ ಒಪ್ಪಿ, ಕಾಫರರಾದರೆ ಆಜನರಲ್ಲಿ ಸೇರಿ, ಹೀಗೆಂದು ಖಾಜಿ ಹೇಳಿದನು. ಆಗ ದುರ್ಗದ ಮುಖಂಡ ತುರುಕರಾದ ಕುತಬಂದಿಖಾ, ಸಲಾಬತ್ತುಖಾ, ಮಾಹಮದಖಾ, ಬಿಜಲಿಖಾ, ಮೊಹದೀನ್‌ಖಾ ಕಲ್ಯಾಣಿ ವಗೈರೆ ತುರುಕರೆಲ್ಲಾ ಹೈದರನಿಗೆ ಸಹಾಯಮಾ

ಡಲು ಒಪ್ಪಿದರು. ಮೊಹರಂ ಹಬ್ಬದಲ್ಲಿ ತಮ್ಮ ಜನರೆಲ್ಲಾ ಸೇರಿ ಪಂಜೆ ಕೂರಿಸಿದ ವೇಳೆಯಲ್ಲಿ ಈ ಪ್ರಸ್ತಾಪಮಾಡಿ, ಕಡೇದಿವಸ ಪಂಜೆ ತೊಳೆಯಲು ಮಲ್ಲಾಪುರದ ಕೆರೆಬಳಿಗೆ ಹೋಗಿ ಅಲ್ಲಿ ಹೈದರಲ್ಲಿಯ ಭೇಟಿ ಮಾಡಿ ಮದಕರಿನಾಯಕನಿಗೆ ಹಿಡಿದುಕೊಡುವುದಾಗಿ ತಮ್ಮ ಕಲಾಮುಲ್ಲಾ ಶಾಸ್ತ್ರಮುಟ್ಟಿ ಪ್ರಮಾಣಮಾಡಿಕೊಟ್ಟು ದುರ್ಗಕ್ಕೆ ಹಿಂತಿರುಗಿ ಬಂದರು. ಪಾಳಯಗಾರನ ಚಾಕರಿಯಲ್ಲಿದ್ದ ಮರಾಟೆಯವರೂ ಎರಡು ವರುಷದಿಂದ ಲಡಾಯಿ ಮಾಡಿ ಸಾಕಾಗಿ, ಅರೆವಾಸಿ ಹೈದರನ ಫಿತೂರಿ ಬುಟ್ಟಿಗೆ ಬಿದ್ದರು. ಆದಾಗ್ಯೂ ಉಳಿದ ಜನರು ಬಹಳ ಸಾಹಸಮಾಡಿ ಪುನಃ ೩ ತಿಂಗಳವರೆಗೂ ಜಗಳ ಮಾಡುತ್ತಲೇ ಇದ್ದರು. ಉಳಿದ ದಂಡಿನ ಸರದಾರರು ಮಾಡಿದ ಸಾಹಸಕ್ಕೆ ದೊರೆಯು ಅವರಿಗೆ ಭಾರಿ ಮುತ್ತಿನಹಾರ, ಖಡೆ ತೋಡ ಶಾಲು ಮೊದಲಾದ ಖಿಲ್ಲತ್ತನ್ನು ತರಿಸಿಕೊಡಲು ಆ ಸರದಾರರು—ಶಿವಪ್ರಸಾದ್, ಧನಸಿಂಗ್, ರಾಮಸಿಂಗ್, ಲಕ್ಷ್ಮಣಸಿಂಗ್, ಈ ನಾಲ್ಕುಜನ ಸರದಾರರೂ, ದೊರೆಯನ್ನು ಕುರಿತು, ಕೈಮುಗಿದು—ಬುದ್ಧಿ, ನಾವು ಯಾವ ಜಯವನ್ನು ಹೊಂದಿದ್ದಕ್ಕೆ ನಮಗೆ ಇನಾಂ ಕೊಡಬೇಕು? ನಾವು ಶತ್ರುಗಳನ್ನು ನಾಶಮಾಡಿ ಓಡಿಸುವ ತನಕ ನಾವು ಯೇನನ್ನೂ ಅಂಗೀಕರಿಸುವದಿಲ್ಲ. ಇದೂ ಅಲ್ಲದೆ ನಮ್ಮ ದೇಶದಲ್ಲಿ ಸಿಪಾಯಿ ಜನರು ಇನಾಂ, ಏಕನಾಮು ಮೊಲಾದ್ದನ್ನು ತೆಗೆದುಕೊಳ್ಳತಕ್ಕ ದಂಡಕವಿಲ್ಲ ; ಮಹಾರಾಜಾ, ಸಲಾಂ ; ಭಾಟ ಭಟಂಗಿ ಮತ್ತು ತಾಫೇದವರಿಗೆ ಇನಾಂ ಹೊರತು ಸಿಪಾಯಿಗಳಿಗೆ ಇನಾಂ ಮಂಜೂರಿಲ್ಲ, ತಮ್ಮ ದಯ ಬಂದು ನಮಗೆ ಅನಂತವಾಗಿದೆ, ಎಂದು ಅರಿಕೆ ಮಾಡಿದರು. ಆದರೂ ಮದಕರಿನಾಯಕನು ಬಲವಂತಮಾಡಿ ಅವರಿಗೆ ಮುತ್ತಿನ ಕಂಠಿ ಮೊದಲಾದ ಇನಾಂ ಕೊಟ್ಟನು. ಇಲ್ಲಿ ಶ್ಲಾಘನೆಗೆ ಅರ್ಹವಾದ್ದು ಆ ದೊರೆಯ ಧಾರಾಳವೋ ಆ ಶೂರರ ನೈಸ್ಪೃಹ್ಯವೋ ಹೇಳುವುದು ಕಷ್ಟ, ಅವರ ಸ್ವಾಮಿಭಕ್ತಿ ಅಷ್ಟರಮಟ್ಟಿಗೆ ಇತ್ತು.

ವಿಳಂಬಿ ಸಂ॥ ಮಾಘ ಬ॥ ೨ಯಲ್ಲು ಶತ್ರುಗಳು ಪುನಃ ಹಲ್ಲಾ ಹತ್ತಲು ಯತ್ನಮಾಡಿದರು. ಆ ದಿವಸ ಖಾಡಾಖಾಡಿ ಯುದ್ಧವಾಯಿತು. ಆದಾಗ್ಯೂ ಶತ್ರುಗಳು ಏನೂ ಮಾಡಲಾರದೇ ಹೋದರು. ಎರಡು ಕಡೆ

ಯಲ್ಲಿಯೂ ಅನೇಕ ಜನ ಸತ್ತರು. ರಾಜರ ಕಡೆ ಬಾಳಾಜಿಪಂತು ತವ್ಮ್ರಾಜಿ ವೀರಸ್ವರ್ಗವನ್ನು ಹೊಂದಿದನು. ಇದರಿಂದ ಪಾಳಯಗಾರ ನಿಗೆ ದೊಡ್ಡ ಬಲ ಮುರಿಯಿತು. ರಂಗೈಯ್ಯನಬಾಗಿಲಕಡೆ ಹೈದರನ ಸೇನೆಯವರು ಭಾರಿಯಾಗಿ ಮೊಹರ್ಚೆ ಕಟ್ಟಿ ಫಿರಂಗಿಯನ್ನೂ, ಮಕರ ಡಿಬ್ಬಿಯನ್ನೂ ಹೊರಗಿನಿಂದ ಹೊಡೆಯುತಾ ಬಂದರು. ಇದನ್ನು ಕಂಡು ದುರ್ಗದವರು ಮೊಹರ್ಚೆ ಕೆಳಕ್ಕೆ ಒಳಗೇ ಸುರಂಗ ಹಾಕಿ ನೂರು ಬುದ್ದಲಿಗೆ ಮದ್ದು ತುಂಬಿ ಬತ್ತಿಕೊಟ್ಟರು. ಹೊರಗಿನ ಮೊಹರ್ಚೆ ಹಾರಿಹೋಗಿ ಶ್ರೀರಂಗಪಟ್ಟಣದ ದಂಡು ಬಹಳ ಹತವಾಯಿತು. ಆದರೂ ಹೊರಗಿನಿಂದ ಏಟು ಬಲವಾಯಿತು. ಹೊರಗಿನ ಕೋಟೆಗೆ ಒಳಗಿನ ಜನ ಸಾಲಲಿಲ್ಲ. ಆ ಕೋಟೆ ನರಗಾಯಿತು, ಪಟ್ಟಣದ ಜನಹೊಂಡದ ನೀರಿಗೆ ಹೋಗಲು ಸಾಧ್ಯವಾಗಲಿಲ್ಲ, ಹೊರಗಿನ ಖಿಲ್ಲೆ ಬಿಟ್ಟು ಗಾರೆ ಬಾಗಿಲ ಖಿಲ್ಲೆ ಬಲವಾಗಿದ್ದಕಾರಣ, ಉಳಿದ ಸೇನೆಯನ್ನು ಅಲ್ಲಿ ಸಜ್ಜು ಮಾಡಿದರು. ಆತುರದಲ್ಲಿ ಹೊರಗಿನ ಜನ ಹೊರಗೆ ನಿಂತುಹೋಯಿತು. ಒಳಗಿನ ಜನ ಒಳಗೆ ನಿಂತು ಹೋಯಿತು. ಗಾರೇಬಾಗಲಿಗೂ ನವಾ ಬರ ಕಡೆಯವರು ಮೊಹರ್ಚೆ ಕಟ್ಟಿ ಮಕರಡಿಬ್ಬಿ ಹೊಡೆಯುತಾ ಬಂದರು.

ಜರಿಮಲೆಯವರ ದ್ರೋಹ.

ಹೆಬ್ಬುಲಿಕಲ್ಲು ದುರ್ಬಲವಾದ ಸ್ಥಳವೆಂದು ಹೈದರನ ಕಡೆಗೆ ಸೇರಿ ಕೊಂಡಿದ್ದ ಜರಿಮಲೆಯವರು ಗುಟ್ಟ ತಿಳಿದಿದ್ದ ಕಾರಣ ಅವರು ೧೦೦೦೦ ದಂಡಿನೊಡನೆ ಅಲ್ಲಿಗೆ ನುಗ್ಗಿದರು. ಮದಕರಿನಾಯಕನು ೫೦೦೦ ಸೇನೆ ಯೊಡನೆ ಅಲ್ಲಿಗೆ ಹೋಗಿ ಆ ಶತ್ರುಗಳ ಮೇಲೆ ಬಹಳವಾಗಿ ಯುದ್ಧಮಾ ಡಿದನು. ಉಭಯಪಕ್ಷದಲ್ಲಿಯೂ ಬಹಳ ಜನ ಸತ್ತುಹೋದರು. ನವಾ ಬನ ಸೇನೆಯವರು ಗಾರೇ ಬಾಗಿಲಬಳಿ ಬಂದು ದಬದಬ ಕಟ್ಟಿ ೬ ಫಿರಂಗಿ ಏರಿಸಿ ಹೊಡೆಯುತಾಬಂದರು. ಮಕರಡಿಬ್ಬಿ ಏಟು ಜೋರಾ ಯಿತು. ಫಿತೂರಿಯಿಂದ ಬಸವನ ಬುರುಜನ್ನೂ ಅಲ್ಲಿನ ಸೇನೆಯವರು ಹಗೆಗಳ ವಶಮಾಡಿದರು. ಶತ್ರುಗಳು ವಿಶೇಷವಾಗಿ ಕೈಯನ್ನು ಬಲ ಮಾಡುತಾಬಂದರು. ದುರ್ಗ ಉಳಿಯುವಹಾಗೆ ಕಾಣಲಿಲ್ಲ.

ವೀರಸ್ವರ್ಗ ಸೂರೆಗೊಳ್ಳುವುದು. ಶ|| ೧೭೦೦ನೆ ವಿಳಂಬಿ ಸಂ|| ಮಾಘಮಾಸ.

ಆಗ ಮದಕರಿನಾಯಕನು—ಈ ದಿವಸ ದುರ್ಗ ಉಳಿಯುವುದಿಲ್ಲ, ಶತ್ರುಗಳ ವಶವಾಗುವುದು ಖಂಡಿತ; ನಾನು ಅವರಿಗೆ ಸೆರೆ ಸಿಕ್ಕಿ ಅವಮಾನ ಪಡುವದಕ್ಕಿಂತಲೂ ಯುದ್ಧಕ್ಕೆ ಹೋಗಿ ಪರಾಕ್ರಮದಿಂದ ಶತ್ರುಗಳನ್ನು ಎದುರಿಸುತಾ ವೀರಸ್ವರ್ಗವನ್ನು ಸೂರೆಗೊಳ್ಳುವುದೇ ನನ್ನ ಶಪಥ, ಹೀಗೆಂದು ನಿಷ್ಕರ್ಷೆ ಮಾಡಿ ತನ್ನ ಹಿರೀ ರಾಜಪುತ್ರನಾದ ಭರಮಪ್ಪನಾಯಕನಿಗೆ ಪಟ್ಟಾಭಿಷೇಕಮಾಡಿ, ತಾನು ಪ್ರಾತಃಕಾಲ ಸ್ನಾನವನ್ನು ಮಾಡಿ ದೇವರಪೂಜೆ ಮಾಡಿ ದೇವಸ್ಥಾನಗಳಲ್ಲೆಲ್ಲಾ ಪೂಜೆಯನ್ನು ಮಾಡಿಸಿ, ಬ್ರಾಹ್ಮಣರಿಗೆ ದಾನಧರ್ಮಾದಿಗಳನ್ನು ಕೊಟ್ಟು ಪ್ರಸಾದವನ್ನು ಸ್ವೀಕರಿಸಿ, ರಾಣಿವಾಸದವರಿಗೆ ಸಮಾಧಾನ ಹೇಳಿ ಉಳಿದವರಿಗೆಲ್ಲಾ ಬುದ್ಧಿವಾದವನ್ನು ಹೇಳಿ, ತರುವಾಯ ವೀರರ ಉಡುಪನ್ನುಟ್ಟು, ಮುವತ್ತೆರಡು ಆಯುಧಸಹಿತವಾಗಿ ವೀರತೊಡಿಗೆಯನ್ನು ತೊಟ್ಟು ಜಯಭೇರಿಯನ್ನು ಹೊಡೆಯಿಸಿ, ವೀರಕಂಕಣವನ್ನು ಕಟ್ಟಿ, ಅಲ್ಲಿದ್ದವರೆಲ್ಲರ ಸಂಗಡಲೂ, "ಭರಮಪ್ಪನಾಯಕ "ರಿಗೆ ಪಟ್ಟ ಕಟ್ಟಿದೆ, ನಾನು ವೀರಸ್ವರ್ಗವನ್ನು ಸೂರೆಗೊಳ್ಳಲು ಹೊರ "ಡುತೇನೆ, ವೀರಸ್ವರ್ಗಾಪೇಕ್ಷೆಯುಳ್ಳವರೆಲ್ಲರೂ ನಮ್ಮೊಡನೆ ಬರಬ "ಹುದು" ಎಂದು ಅಪ್ಪಣೆ ಕೊಟ್ಟನು. ಆಗ ಖಾಸಾ ರಾಜಪುತ್ರ ಭರಮಪ್ಪನಾಯಕ, ತಮ್ಮ ಪರಶುರಾಮಪ್ಪನಾಯಕ ಮೊದಲಾದ ಸಮೀಪ ಸಂಬಂಧಿಗಳೆಲ್ಲಾ ಹೊರಟರು. ಇನ್ನೂ ಇತರ ವೀರರೂ ಹೊರಟರು. ಹೀಗೆ ಸಜ್ಜುಮಾಡಿಕೊಂಡು ಅಂಬಾರಿಮೇಲೆ ಸವಾರಿ ಹೊರಡುವುದರೊಳಗಾಗಿ—ಹತ್ತುಸಾವಿರ ಬಾರು, ಕರ್ನಾಟಕ ವಗೈರೆ ಸಿದ್ಧವಾಗಿದಾರೆ, ನವಾಬ ಹೈದರಲ್ಲಿಯು ಉತ್ಸವಾಂಬನ ಗುಡಿಯಲ್ಲಿ ಇದಾನೆ, ಮುಂದೆ ಬಳಕೋಟೆಗೆ ಹಲ್ಲಾ ಹತ್ತಲು ಪ್ರಯತ್ನಮಾಡುತಿದಾನೆ, ಎಂದು ವರ್ತಮಾನಬಂತು. ಕೂಡಲೇ ರಾಜನು ಆನೆಯಮೇಲೆ ಸತುವಿನ ಅಂಬಾರಿಯಲ್ಲಿ ಕೂತು ಸವಾರಿ ಹೊರಟನು. ಆಗ ಖಾಸಾಹಜರತ್ತು ಮುಕ್ಕಂಣಿ ಸುತ್ತು ಪಂಚಕಸೆ ಯಡಭರ್ಜಿ ಬಲಭರ್ಜಿಯವರೂ, ಖಾಸಾ ಬಂದೂಖಿನವರೂ, ಪೂರಭಯ್ಯಾದವರಲ್ಲಿ ಶಿವಪ್ರಸಾದ್, ಧನಸಿಂಗ್, ರಾಮಸಿಂಗ್, ಲಕ್ಷ್ಮಣಸಿಂಗ್, ಉದಯರಾಂ ಈ ವೀರರೆಲ್ಲಾ ಹೊರಟರು.

ರಣಭೇರಿ ಹೊಡೆದರು. ಆಗ ಭಟರು "ಮಹಾರಾಜ ಛತ್ರಪತಿ ಖಡೆಯು ಶೋವಂತ ಪರಬಲ ಬಡಬಾನಲ ಅರಿರಾಜ ಮಾನಮರ್ದನ ಅರಿಕಲಭ ಕಂಠೀರವ ವೀರ ಮದಕರಿರಾಜ ಭಾರಿನಿಗಳಾಂಕ ಜಯ ಜಯ" ಎಂದು ಹೊಗಳಿದರು. ಹೀಗೆ ಸವಾರಿ ಹೊರಟು ಶತ್ರುಗಳನ್ನು ಹೊಡೆಯುತಾ ಹೋದರು. ತರುವಾಯ ಹಗೆಗಳ ಸಂದಣಿ ಬಲವಾಯಿತು. ಆಗ ರಾಜನು ಆನೆಯನ್ನಿಳಿದು ಕುದುರೆಯನ್ನೇರಿ ಕತ್ತಿ ತೆಗೆದುಕೊಂಡು ಶತ್ರುಸೇನೆ ಯನ್ನು ಕಡಿಯುತಾ ಹೋದನು. ಬಲವಾಗಿ ಪೆಟ್ಟುಬಿತ್ತು. ಅದನ್ನು ಲಕ್ಷ್ಯಮಾಡದೆ ಶತ್ರುಗಳ ಮಧ್ಯೆನುಗ್ಗಿ ಹೋದನು. ಆತನ ಕೀರ್ತಿ, ಪ್ರತಾಪ, ಯಶೋ, ಧರ್ಮ, ಧೈರ್ಯ್ಯೌದಾರ್ಯಾದಿ ಗುಣಗಳು ಮಾತ್ರ ಭೂಮಿಯಲ್ಲಿ ಉಳಿದವು. ದೊರೆಯ ಸಂಗಡ ಬಂದಿದ್ದ ಬಂಧುಜನರಿಗೂ ಪರಿವಾರದವರಿಗೂ ಬಹಳ ಏಟು ಬಿತ್ತು. ಹೇವಿಳಂಬಿ ಸಂ॥ ದಲ್ಲಿ ಹೈದ ರನ ಯುದ್ಧ ಮೊದಲಾಗಿ ವಿಳಂಬಿವರೆಗೆ ಎರಡುವರ್ಷ ನಡೆದು ಆ ವರು ಷ ಮಾಘಮಾಸದಲ್ಲಿ ಚಿತ್ರದುರ್ಗದ ಸಂಸ್ಥಾನ ಹೋಯಿತು. ಮದಕರಿ ನಾಯಕನು ಹೈದರನ ಕೈಗೆ ಸೆರೆ ಸಿಕ್ಕಿದನೆಂದು ಕೆಲವರು ಹೇಳುತಾರೆ.

---

## ೨೦ ನೇ ಅಧ್ಯಾಯ.

ಮೇಲೆ ಹೇಳಿದ ಪ್ರಕಾರ ಚಿತ್ರದುರ್ಗದ ಸಂಸ್ಥಾನ ಹೋಯಿತು. ಮದಕರಿನಾಯಕನು ಬಹಳ ಬಲಿಷ್ಠನಾದ ದೊರೆಯಾಗಿದ್ದಕಾರಣ ಹೈದ ರಲ್ಲಿಯು ಮೊದಲು ಈ ಸಂಸ್ಥಾನದೊಡನೆ ಸ್ನೇಹವನ್ನು ಬೆಳೆಯಿಸಿದನು. ಮತ್ತು ಚಿತ್ರದುರ್ಗದವರು ಬಲವಾದ ಸಹಾಯವನ್ನು ಕೊಟ್ಟು ನಗರ, ಬಂಕಾಪುರ ಮೊದಲಾದ ಹಲವು ಸಂಸ್ಥಾನಗಳನ್ನು ಜೈಸಿಕೊಟ್ಟು ಮಾಡಿದ ಉಪಕಾರಕ್ಕೆ ಹೈದರನು ಮದಕರಿನಾಯಕನಿಗೆ ಕೆಲವು ಅಲ್ಪವಾದ ನಸರನ್ನು ಕಳುಹಿಸಿದನು. ಆದಿಯಲ್ಲಿ ಈ ದೊರೆಗೂ ಹೈದರಲ್ಲಿಗೂ ವಿಶೇಷವಾಗಿ ಸ್ನೇಹವಿತ್ತು. ಈ ಮೈತ್ರಿ ಬಿಡೆದು ಮಧ್ಯೆ ವೈಮನಸ್ಯ ಹುಟ್ಟುವುದಕ್ಕೆ ಏನುಕಾರಣವಾಯಿತೋ ಪೂರ್ವದ ಲೇಖನಗಳಿಂದ ಗೊತ್ತಾಗುವುದಿಲ್ಲ. ಪ್ರಾಯೇಣ ಬಲವಾದ ರಾಜ್ಯಗ ಳನ್ನು ದುರ್ಗದವರು ತಮ್ಮ ಶ್ಲಾಘ್ಯತರವಾದ ಹೋರಾಟದಿಂದ ಗೆದ್ದು

ಹೈದರಲ್ಲಿಯ ವಶಮಾಡಿದರಷ್ಟೆ. ಇದಕ್ಕೋಸ್ಕರ ಹಿಂದೆ ನಡೆದಿರಬಹು ದಾದ ಮಾತಿನಂತೆ ಅವನು ನಡೆಯದೆ ತಪ್ಪಿದನೆಂಬ ಅಂಶವು, ಯುದ್ಧ ಕಾಲದಲ್ಲಿ ಶ್ರೀರಂಗಪಟ್ಟಣದ ವಕೀಲರು ದುರ್ಗಕ್ಕೆ ಬಂದು ನವಾಬನ ಆಶಯದ ಉದ್ದುರುಟನಮಾತನ್ನು ಹೇಳಿದಾಗ ಉತ್ತರವಾಗಿ ಮದಕರಿ ನಾಯಕನು ಹೇಳಿ ಕಳುಹಿಸಿದ ಸಂಗತಿಯಿಂದ ವ್ಯಕ್ತವಾಗುವುದು. ಈ ದ್ರೋಹವನ್ನು ಮದಕರಿನಾಯಕನು ಮನಸ್ಸಿನಲ್ಲಿಟ್ಟುಕೊಂಡು ಸಮಯ ವನ್ನು ನಿರೀಕ್ಷಿಸುತಿದ್ದನು

ಈ ಹೈದರನ ಪ್ರಾಬಲ್ಯವನ್ನು ಮುರಿದು ಬಿಟ್ಟರೆ ತಂಜಾವೂರ ವೆಂಕೋಜಿಯ ರಾಜ್ಯವೂ ಸೇರಿ ಆಸೇತು ಹಿಮಾಚಲ ಪರ್ಯಂತವೂ ಮರಾಟೆಯವರ ಚಕ್ರಾಧಿಪತ್ಯಕ್ಕೆ ಸೇರುವುದೆಂಬ ಕೋರಿಕೆಯಿಂದ ಪೂನೆ ಶ್ರೀಮಂತ ದೊಡ್ಡಮಾಧವರಾವ್ ಪೇಶ್ವೆಯು ನಾಲ್ಕು ಲಕ್ಷಫೌಜಿ ನೊಡನೆ ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಲುಬಂದಾಗ, ಈ ಪ್ರಾಂತ ದಲ್ಲಿ ಬಲವಾದ ಸಂಸ್ಥಾನೀಕನೆನ್ನಿಸಿಕೊಂಡಿದ್ದ ಮದಕರಿನಾಯಕನ ಸಹಾ ಯವನ್ನು ಕೇಳಲೇ ಬೇಕಾಯಿತು. ಹೀಗೆ ಸ್ಥಳೀಯಸಂಸ್ಥಾನಿಕರು ಕೆಲವರನ್ನು ತನ್ನ ಮಿತ್ರರನ್ನಾಗಿ ಮಾಡಿಕೊಳ್ಳತಕ್ಕದ್ದು ದೂರದೇಶದಲ್ಲಿ ಅತಿ ವಿಸ್ತಾರವಾಗಿರುವ ಮರಾಟೆ ಸಂಸ್ಥಾನದ ಆಳಿಕೆಯ ಬಿಗಿಗೆ ಒಂದು ಅಂಗವೆಂದು ಪೇಶ್ವೆಯು ದೂರವಾದ ದೃಷ್ಟಿಯನ್ನು ಇಟ್ಟುಕೊಂಡಿ ದ್ದನು. ಇತ್ತ ಮದಕರಿನಾಯಕನಿಗಾದರೋ ಹೈದರಮಾಡಿದ ಮೋ ಸಕ್ಕೆ ದ್ವೇಷವನ್ನು ಸಾಧಿಸಿಕೊಳ್ಳಲು ಬಲಿಷ್ಠರಾದವರ ಸ್ನೇಹ ಅವ ಶ್ಯಕವಾಯಿತು.

ಈ ಕೆಲಸಕ್ಕೆ ಹೈದರನಿಗಿಂತಲೂ ನೂರುಪಾಲು ಪ್ರಬಲಕಕ್ಷಿ ಯಾಗಿ ಬಂದು ಅವನಿಂದಲೂ ಖಂಡಣಿ ಹಣವನ್ನು ವಸೂಲ್ಮಾಡಿಕೊಂ ಡು ಹೋಗುತಾ ಇದ್ದ ಮರಾಟೆಯವರೇ ತಕ್ಕಗಂಡು ಎಂದು ಅವರ ನೆರ ವನ್ನು ಪಡೆಯತಕ್ಕದ್ದು ದೂರದೃಷ್ಟಿಯುಕ್ತವಾದ ಒಂದು ರಾಜನೀಯ ವೆಂದು ತಿಳಿದಿದ್ದದು ಸಹಜವಾಗಿದೆ.

ಈ ಪ್ರಕಾರ ಹೈದರಲ್ಲಿಯ ಶತ್ರುಗಳಾದ ಮರಾಟೆಯವರಲ್ಲಿ ಸಖ್ಯ ವನ್ನು ಮಾಡಿಕೊಂಡು ಮದಕರಿನಾಯಕನು ಶ್ರೀರಂಗಪಟ್ಟಣದ ಮುತ್ತಿ

ಗೆಗೂ, ಚಿನಕುರಳೀಕಾಳಗಕ್ಕೂ ಸೇನೆಯೊಡನೆ ಹೋಗಿ ಜಯವನ್ನು ಹೊಂದಿಬಂದನು. ನವಾಬನಿಗೆ ಇವನಮೇಲೆ ಇನ್ನೂ ದ್ವೇಷ ಹೆಚ್ಚಿತು.

ಇದಕ್ಕೆ ಮುಂಚೆ ಮದಕರಿನಾಯಕನಿಗೆ ವಯಸ್ಸು ಚಿಕ್ಕದಾಗಿದ್ದಾಗ ಹೈದರಲ್ಲಿಯು ದುರ್ಗದ ಸೀಮೆಯ ಕೆಲವು ಗಡಿಗಳನ್ನು ಹಿಡಿದ ಕಾರಣ, ಆ ಸಂಸ್ಥಾನದವರು ಬೀಸುವ ದೊಂಣೆಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಆ ನವಾಬ ಕೇಳಿದಂತೆ ಖಂಡಣಿ ೨೦೦೦೦೦ ವರಹ ಕೊಡುವುದಕ್ಕೆ ಒಪ್ಪಿಕೊಂಡಿದ್ದರು. ಈ ಸೀಮೆಯ ಗೋಜಿಗೆ ಆಗಾಗ್ಯೆ ಬರಲು ಹೈದರನಿಗೆ ಇದು ಒಂದು ನೆಪವಾಯಿತು. ಪ್ರಬಲ ಶಕ್ತಿಯಾದ ಮರಾಟಿಯವರ ಸ್ನೇಹವು ದುರ್ಗದ ನಾಯಕನಿಗೆ ಹೆಚ್ಚಾದ ಧೈರ್ಯವನ್ನು ಹುಟ್ಟಿಸಿದಕಾರಣ, ಆತನು ಎರಡು ವರುಷದ ಖಂಡಣಿಯನ್ನು ಹೈದರನಿಗೆ ಕೊಡದೆ ನಿಲ್ಲಿಸಿಬಿಟ್ಟನು.

ಹಿಂದುಗಳಲ್ಲಿಯೂ ಅವರ ಮತದಲ್ಲಿಯೂ ಟೀಪುಸುಲ್ತಾನನಿಗೆ ವೈರವಿತ್ತು ಎಂದೂ, ಹೈದರಲ್ಲಿಗೆ ಅಂಥ ಮತಸಂಬಂಧವಾದ ವೈರವಿರಲಿಲ್ಲವೆಂದೂ ಹೇಳುವ ಜನವಾರ್ತೆಯು, ಟೀಪುಸುಲ್ತಾನನಿಗೆ ಇದ್ದ ಸ್ವಮತಾಭಿಮಾನದ ಆಧಿಕ್ಯವನ್ನು ತೋರಿಸುವುದೇ ಹೊರತು ಹೈದರನಿಗೆ ಇದ್ದ ಮತವಿಚಾರದ ಸಮದೃಷ್ಟಿಯನ್ನು ತೋರಿಸುವುದಿಲ್ಲ. ಇದಕ್ಕೆ ಮುಂದೆ ಬೇಕಾದಷ್ಟು ಕಾರಣಗಳು ಸೂಚನೆಯಾಗುವವು.

ಇತರ ಸಂಸ್ಥಾನದವರು ಹೇಗೆ ಮಾಡಿದರೂ ತಪ್ಪು ಎಂದು ತನ್ನ ರಾಜ್ಯವನ್ನು ವಿಸ್ತರಿಸುವುದಕ್ಕೂ, ಅದಕ್ಕಾಗಿ ಜಗಳ ತೆಗೆಯುವುದಕ್ಕೂ ಕಾಲ ಕೆರೆಯುತ್ತಲೇ ಇದ್ದ ನವಾಬನಿಗೆ ೨ ವರುಷದ ಖಂಡಣಿ ಹಣವನ್ನು ನಿಲ್ಲಿಸಿಕೊಂಡದ್ದು ಯುದ್ಧಕ್ಕೆ ಕಾರಣವಾಯಿತು.

ಹೈದರಲ್ಲಿಯ ಸಹಾಯಕ್ಕಾಗಿ ಮದಕರಿನಾಯಕನು ಅನೇಕ ಯುದ್ಧಗಳಿಗೂ, ಮುತ್ತಿಗೆಗಳಿಗೂ ಹೋಗಿ ಅವನ ಕೈಯಲ್ಲಿ ಆಗದ ಕೋಟೆಗಳನ್ನೆಲ್ಲಾ ಜೈಸಿ ಆ ನವಾಬನಿಗೆ ವಶಮಾಡಿದ್ದೂ ಆ ಯುದ್ಧಗಳಲ್ಲಿ ದುರ್ಗದ ಬೇಡರು ಮಹಾ ಧೈರ್ಯವಾಗಿ ಶತ್ರುಜನಗಳ ತಲೆಯನ್ನು ತಂದು ತಮ್ಮ ದೊರೆಗೆ ಒಪ್ಪಿಸುತಿದ್ದದೂ, ಸಹಾ ಹೈದರನ ಮೆಚ್ಚಿಗೆ

ಯನ್ನೂ ಶ್ಲಾಘನೆಯನ್ನೂ ಹೊಂದುವುದಕ್ಕೆ ಬದಲಾಗಿ ಅಸೂಯವನ್ನು ಹುತಮಾಡಿದವು. ಈ ನವಾಬನು ದುರ್ಗದಮೇಲೆ ದಂಡೆತ್ತಿ ಬರುವುದಕ್ಕೆ ಇದೂ ಒಂದು ಕಾರಣವಾಯಿತೆಂದು ಹೇಳಲು ಸಂದೇಹವಿರುವುದಿಲ್ಲ.

ದೊರೆಯ ಭಾವಮೈದನಾದ ಮತ್ತೋಡು ಹಾಲಪ್ಪನಾಯಕನು ಚಿತ್ರದುರ್ಗದ ನಾಯಕನಮೇಲೆ ಯಾವಾಗಲೂ ದ್ವೇಷವನ್ನು ಮಾಡುತಿದ್ದನು. ಮುಖ್ಯವಾಗಿ ಇವನ ಬಲವನ್ನು ನಂಬಿ ಹೈದರನು ಆದಿಯಲ್ಲಿ ದುರ್ಗದ ಗೋವುಗಳನ್ನು ಹಿಡಿಸಿದನು. ಈ ಬಳಗಂಡಕಳ್ಳನ ಕೀಟಲೆಯಿಂದ ಖಂಡಣಿಪಾವತಿಯಾದಮೇಲೂ ಕೂಡಾ ಈ ಹಾಲಪ್ಪನೇ ಮತ್ತೆ ಜಗಳವನ್ನು ತಂದಿಟ್ಟವನು. ಸ್ವಯೂಥ ಕಲಹಕ್ಕಿಂತಲೂ ಅಧಿಕವಾದ ವಿಷ ಬೇರೆಇಲ್ಲ.

ಇದೆಲ್ಲವೂ ಪಾಳಯಗಾರನಿಗೆ ಗೊತ್ತಿರಲಿಲ್ಲವೆಂದು ಹೇಳಲು ಆಧಾರಸಾಲದು. ತಿಳಿದು ತಿಳಿದೂ ಹೈದರನಲ್ಲಿ ಮೊದಲು ಸ್ನೇಹಮಾಡಿದ್ದೂ ತಪ್ಪು, ತರುವಾಯ ದ್ವೇಷವನ್ನು ಬೆಳಸಿದ್ದೂ ತಪ್ಪು.

ಹೈದರನು ಕೇವಲ ಸಾಹಸಿ, ತಂತ್ರಗಾರ, ಸಮಯಬಂದಹಾಗೆ ತಿರುಗಿಕೊಂಡು ತನ್ನ ಕಾರ್ಯವನ್ನು ಗೆಲ್ಲುವುದರಲ್ಲಿ ಬಹಳ ಸಮರ್ಥ. ಮದಕರಿನಾಯಕನ ಕಡೆಯಲ್ಲಿ ಮದಕರಿನಾಯಕ ಒಬ್ಬ ಹೊರತು ಹೈದರನ ಸಮಪಾಶಿ ಮನುಷ್ಯರು ಬೇರೆ ಯಾರೂ ಇರಲಿಲ್ಲ. ಈ ದೊರೆಯು ಹೈದರನನ್ನು ಗೆಲ್ಲುವುದಕ್ಕೆ ಮಾಡಿದ್ದ ಪ್ರಯತ್ನಗಳೇನೂ ಕಡಮೆಯಾಗಿರಲಿಲ್ಲ. ಮೊಟ್ಟಮೊದಲು ದುರ್ಗದ ಕೋಟೆಯೇ ಬಲವಾದ್ದು. ಒಳಗೆ ಎಷ್ಟು ಸ್ವಲ್ಪಸೇನೆ ಇದ್ದಾಗ್ಯೂ ಹೊರಗಡೆ ಇದ್ದ ನಾಲ್ಕರಷ್ಟು ಸೇನೆಗೆ ಆಸ್ಪದಕೊಡಲಿಲ್ಲ. ಯಾವಾಗ ಯಾವಕಡೆ ಹಲ್ಲಾ ಹತ್ತುವುದಕ್ಕೆ ಹೋದರೂ ಶತ್ರುಗಳಿಗೆ ಸೋಲಾಗುತ್ತಲೇ ಬಂತು. ಒಂದು ವರುಷದವರೆಗೂ ಹೀಗೇ ಆಯಿತು. ಆಗ ನವಾಬನು ಯುಕ್ತಿಯಾಗಿ ಪೊಳ್ಳುಸಮಾಧಾನವನ್ನು ಮಾಡಿಕೊಂಡು ನಾಲ್ಕು ಲಕ್ಷ ವರಹ ಖಂಡಣಿಯನ್ನೂ ತೆಗೆದುಕೊಂಡು ಹೊರಟುಹೋದಂತೆ ಮಾಡಿದನು. ಮದಕರಿ

ನಾಯಕನಿಗೆ ಮರಾಟೆಯವರ ಸಹಾಯದ ವಾಗ್ದಾನ ಒಂದು ಆಸೆಯನ್ನು ಹುಟ್ಟಿಸಿತ್ತು. ಆಡಿದ ಮಾತಿನಂತೆ ಪೇಶ್ವೆಯು ೬೦ ಸಾವಿರ ಸೇನೆಯ ನ್ನೇನೋ ಕಳುಹಿಸಿದ, ಆದರೆ ಅವರ ಕಡೆ ಸೇನಾಪತಿಗಳು, ಕೃಷ್ಣಾ, ತುಂಗಭದ್ರಾತೀರದಿಂದ ಈಚೆಗೆ ಬಂದಿದ್ದವರು, ಲಂಚಕ್ಕೆ ಆಶೆಬಿದ್ದು ಹಿಂತಿರುಗಿದರು. ದುರ್ಗದವರ ಕಡೆ ಇದ್ದ ಜರಿಮಲೆ ಮೊದಲಾದ ಚಿಲ್ಲರೆ ಪಾಳಯಗಾರರು ಮೊದಲಿನಿಂದಲೂ ದುರ್ಗದ ಕೋಟೆಯ ಮತ್ತು ಅಲ್ಲಿನ ರಾಜರ ಗುಟ್ಟನ್ನೆಲ್ಲಾ ತಿಳಿದುಕೊಂಡಿದ್ದು ಒಳ್ಳೇಸಮಯದಲ್ಲಿ ಹೈದರನ ಕಡೆಗೆ ತಿರುಗಿಕೊಂಡು ದೊಡ್ಡ ಒಳಗಂಡ ಕಳ್ಳರಾಗಿ ಹಗೆತನ ವನ್ನು ಸಾಧಿಸಲು ನಿಂತರು. ದುರ್ಗದ ತುರುಕ ಪ್ರಜೆಗಳೂ, ತುರುಕ ಅಧಿಕಾರಿಗಳೂ, ಹಾಸಿಗೆ ಹಾವಾಗಿ ತಮ್ಮ ದ್ರೋಹಿತನವನ್ನು ಮತವೈ ರಕ್ಕಿಂತಲೂ ಹೆಚ್ಚಾಗಿ ತೋರಿಸಿದರು. ದುರ್ಗದ ಮರಾಟೆತುಕಡಿಯವರೂ ತುರುಕರ ಜೊತೆಗೆ ಸೇರಿಕೊಂಡರು. ಕಡೆಗೆ ದುರ್ಗದ ೬೦ ಸಾವಿರ ದಂಡಿ ನಲ್ಲಿ ೬ ಸಾವಿರ ಕೂಡಾ ದೊರೆಯ ಸಂಗಡ ಯುದ್ಧಕ್ಕೆ ಹೊರಡಲು ಇಲ್ಲ ವಾಯಿತು.

ಈ ಪ್ರಕಾರ ಮೋಸದಿಂದಲೇ ದುರ್ಗವು ಶತ್ರುಗಳ ಪಾಲಾಯಿತು. ಆಗಿದ್ದ ಪಾಳಯಪಟ್ಟಿನ ರಾಜರುಗಳಲ್ಲೆಲ್ಲಾ ದುರ್ಗದ ದೊರೆಯೇ ಬಹು ಬಲಿಷ್ಠ, ಈ ಮದಕರಿನಾಯಕನು ಸ್ವತಃ ಬಲಶಾಲಿ. ಆಲೋಚನಪರ, ಸ್ವಜನರಲ್ಲಿಯೂ, ಪ್ರಜೆಗಳಲ್ಲಿಯೂ ವಿಶೇಷವಾಗಿ ಅಭಿಮಾನ ಉಳ್ಳ ವನು, ದೇವರಲ್ಲಿಯೂ ಬ್ರಾಹ್ಮಣರಲ್ಲಿಯೂ, ಭಕ್ತರಲ್ಲಿಯೂ, ಹೆಚ್ಚಾಗಿ ಭಕ್ತಿಯನ್ನಿಟ್ಟುಕೊಂಡಿದ್ದನು. ಇವನಲ್ಲಿ ಇದ್ದ ಔದಾರ್ಯ ಗುಣವು ಆ ಕಾಲದಲ್ಲಿದ್ದ ಹೈದರ ಮೊದಲಾಗಿ ಯಾವ ಸಮಪಾಠಿ ಸಂಸ್ಥಾನೀಕರಲ್ಲಿ ಯೂ ಇರಲಿಲ್ಲ. ಯುದ್ಧನಡೆಯುತ್ತಿರುವಾಗ ರಣಧೀರರಾದ ಸರದಾರರಿಗೆ ಈ ದೊರೆಯು ತೋರಿಸಿದ ಗೌರವವೂ, ಕೊಟ್ಟ ಬಹುಮಾನವೂ ತಾವು ಮಾಡಿದ ಕಾರ್ಯ ನಿರ್ವಾಹಕ್ಕೆ ಅತಿಯಾಗಿ ಮಿತಿಮೀರಿದ್ದೆಂದು ತಿಳಿದು ಕೊಂಡು ಆ ಸರದಾರರು ನಾಚಿಕೆಯಿಂದ ಅದನ್ನು ತಿರಸ್ಕರಿಸಿದರು. ಇಷ್ಟುಹೊರತು, ಆ ದೊರೆಯು ನೀಡಿದ ಕೊಡಗೈಯ್ಯನ್ನು ಹಿಂದಕ್ಕೆ ತೆಗೆದುಕೊಂಡವನಲ್ಲ. ಈತನು ಯುದ್ಧದಲ್ಲಿ ಬಹುಶೂರ. ಇವನು ಹಿರಿ

ಯರಂತೆಯೇ ವಿಶೇಷ ಧೈರ್ಯವಂತ, ಪರಾಕ್ರಮಶಾಲಿ, ಯಾವಕೆಲಸ ವನ್ನೂ ಸಮಯವರಿತು ಆಕ್ಷಣದಲ್ಲಿಯೇ ಮಾಡತಕ್ಕವನು, ಯಾವಕಡೆ ಯಲ್ಲಿ ಶತ್ರುಗಳ ಕೈಜೋರಾದರೆ ಆಕ್ಷಣದಲ್ಲಿಯೇ ಆ ಸ್ಥಳಕ್ಕೆಹೋಗಿ ತನ್ನ ಜನರಿಗೆ ಧೈರ್ಯವನ್ನು ಕೊಟ್ಟು ಹಗೆಗಳನ್ನು ಓಡಿಸುತಿದ್ದನು. ಕಡೆಗೂ ಎಷ್ಟು ಸಾಹಸಮಾಡಿದರೂ ಜನಮಾಡಿದ ದ್ರೋಹದಿಂದಲೂ ಪಿತೂರಿಯಿಂದಲೂ ದುರ್ಗದ ಸಂಸ್ಥಾನವು ಹೈದರನಿಗೆ ಸ್ವಾಧೀನವಾ ಯಿತೇ ಹೊರತು ನವಾಬನ ಪರಾಕ್ರಮದಿಂದಲಾಗಲೀ ಮದಕರಿನಾಯ ಕನ ಹೇಡಿತನದಿಂದಲಾಗಲಿ ಖಂಡಿತವಾಗಿಯೂ ಅಲ್ಲವೆಂದು ನಿಸ್ಸಂದೇಹ ವಾಗಿ ಹೇಳಬಹುದು. ಹೀಗೆ ಅನೇಕ ಸುಗುಣಗಳಿದ್ದಾಗ್ಯೂ ಎಂಥಾ ವೀರರಿಗೂ ಕೂಡಾ ಅತಿಘೋರವಾಗಿ ಕಾಣುವಂಥಾ ಒಂದು ಭೀಭತ್ಸರ ಸವು ಇವನ ಕೃತ್ಯದಲ್ಲಿ ಕಂಡು ಬರುತಿತ್ತು. ಒಂದಲ್ಲದೆ ಹಲವುಸಾರಿ ಹೈದರನ ಸಹಾಯಕ್ಕೆ ಹೋಗಿದ್ದಾಗಲೂ ಮರಾಟೆಯವರ ಸಹಾಯಕ್ಕೆ ಹೋಗಿದ್ದಾಗಲೂ ಶತ್ರುಸೇನೆಯವರ ಶಿರಸ್ಸನ್ನು ಕುಯಿಸಿ ತರಿಸಿ ಆ ತಲೇ ಬುರುಡೆಗಳ ಜಗಲಿ ಕಟ್ಟಿಸಿ ಅದರ ಮೇಲೆ ಕೂತು ರಕ್ತದ ಅಭಿ ಷೇಕವನ್ನು ಮಾಡಿಸಿಕೊಂಡ ಭಯಂಕರವಾದ ಕೃತ್ಯವು ಅತಿಭಯಂಕ ರವಾಗಿ ಕಾಣುವುದು.

ದುರ್ಗವು ಕೈವಶವಾದಮೇಲೆ ಈ ದೊರೆಯ ಬೊಕ್ಕಸದಲ್ಲಿದ್ದು ಪಗೆಗಳ ಕೈಗೆ ಸಿಕ್ಕಿದ ನಾಣ್ಯಗಳ ವಿವರ:

| | | |
|---|---|---|
| ೬,೪೦೦,೦೦೦ | .... | ಬೆಳ್ಳೀನಾಣ್ಯ. |
| ೧೦೦,೦೦೦ | .... | ರಾಯಲ್. |
| ೧,೩೦೦,೦೦೦ | .... | ಅಷರಫಿ. |
| ೨,೫೦೦,೦೦೦ | .... | ದಾಬೋಲಿಕದಲಿ. |
| ೧,೦೦೦,೦೦೦ | .... | ಚವುರಿ. |

ಇದಲ್ಲದೆ ಇನ್ನೂ ಇತರ ಬಂಗಾರದ ನಾಣ್ಯಗಳು ವಿಶೇಷವಾಗಿ ದ್ದವು, ಯಾವವೆಂದರೆ:—

೧ ಗಬರು. ೧ ಪ್ರಿಯಕಾವೇರಿ.

| | |
|---|---|
| ೧ ಮೊಹರು. | ೧ ಪ್ರಳಯಗಲುರ. |
| ೧ ಪುತಲಿ. | ೧ ಪಾಪನಾಯಕಿ ಹೊನ್ನು. |
| ೧ ಶಿವರಾಯಿಹೊನ್ನು. | ೧ ಆದವಾನಿಹೊನ್ನು. |
| ೧ ಬಾದಷಾಹಿಹೊನ್ನು. | ೧ ತಾಡಪತ್ರಿಹೊನ್ನು. |
| ೧ ಸಂಣಗಿರಿ. | ೧ ಹಿಂದೆಹೊನ್ನು. |
| ೧ ಅಚ್ಯುತರಾಯಿ. | ೧ ನಿಷಾನಿಖಲು. |
| ೧ ದೇವರಾಯಿ. | ೧ ಕಲ್ಲುಕುಂಟೆ. |
| ೧ ರಾಮರಾಯಿ. | ೧ ದುರ್ಗಿ. |
| ೧ ಜಾತಮಾಹಿಸ್. | ೧ ಇಕ್ಕೇರಿ. |
| ೧ ಧಾರವಾಡಿ. | |



## ಚಿತ್ರದುರ್ಗದ ಸಂಸ್ಥಾನದ ವಾಲ್ಮೀಕಿ ಕುಲದ ಕಾಮಗೇತಿ ವಂಶದ ನಾಯಕರು ಚಿತ್ರದುರ್ಗದಲ್ಲಿ ಆಳಿದ್ದು.

---

### ಮತ್ತಿ ಸಂತತಿ.

ವರುಷಗಳು.

೧ ಮತ್ತಿ ತಿಮ್ಮಂಣನಾಯಕ ಮೂಲಪುರುಷ, ಶಕ ೧೪೯೦ ನೇ ವಿಭವ ಸಂ॥ ದಿಂದ ೧೫೧೧ ನೇ ಸರ್ವಧಾರಿ ಸಂ॥ ದ ವರೆಗೆ ಆಳಿದ್ದು .... ೨೧

೨ ಈತನ ಮಗ ದಧ್ಯನ್ನದ ಓಬಂಣನಾಯಕ, ಶ॥ ೧೫೧೧ ನೇ ವಿರೋಧಿ ಸಂ॥ ದಿಂದ ೧೫೨೫ ನೇ ಶೋಭಕೃತ್ ಸಂ॥ ದ ವರೆಗೆ ಆಳಿದ್ದು. (ಈ ದೊರೆಗೆ ರಸಸಿದ್ಧರು "ಮದಕರಿ" ಎಂದು ಬಿರುದು ಕೊಟ್ಟರು. ಈತನನ್ನು ಗುಡ್ಡದ ಮದಕರಿನಾಯಕ ಎಂತಲೂ ಕರೆಯುತಾರೆ).... ೧೫

೩ ಈತನ ಮಗ ಕಸ್ತೂರಿ ರಂಗಪ್ಪನಾಯಕ, ಶ॥ ೧೫೨೫ ನೇ ಶೋಭಕೃತ್ ಸಂ॥ ದಿಂದ ೧೫೩೪ ನೇ ನಂದನ ಸಂ॥ ದ ವರೆಗೆ .. ೯

೪ ಈತನ ಮಗ ಇಮ್ಮಡಿ ಮದಕರಿನಾಯಕ, ಶ॥ ೧೫೩೫ ನೇ ನಂದನ ಸಂ॥ ದಿಂದ ಶ॥ ೧೫೭೬-೭ ನೇ ಆನಂದ ಸಂ॥ ದ ವರೆಗೆ .... ೨೨

ಈ ಮದಕರಿನಾಯಕನಿಗೆ ಮಕ್ಕಳಿಲ್ಲ. ಈತನ ತಮ್ಮನ ಸಾಕು ಮಗ ಓಬಂಣನಾಯಕನಿಗೆ ಪಟ್ಟಾ ಕಟ್ಟಿದರು. ಮುಂದಿಗೆ ಪಟ್ಟಗಾಣಿಕೆ ಕೊಡಲಿಲ್ಲವೆಂದು ದಳವಾಯಿಗಳು ಎದುರು ಬಿದ್ದು ಓಬಂಣನಾಯಕನ ತಲೇ ಒಡೆದರು.

ಈ ಗಲಭೆಯಕಾಲ ಪರಿಮಿತಿ .... ೩॥ ತಿಂಗಳು

೫ ಚಿಕ್ಕಂಣನಾಯಕ ಶ॥ ೧೫೯೭ ನೇ ರಾಕ್ಷಸ ಸಂ॥ ದಿಂದ ಶ॥ ೧೬೦೮ ನೇ ಅಕ್ಷಯ ಸಂ॥ದವರೆಗೆ. ೧೨

೬ ಚಿಕ್ಕಂಣನಾಯಕನ ಅಂಣ ಮುಮ್ಮ್ಮಡಿ ಮದಕರಿನಾಯಕ, ಶ॥ ೧೬೦೮ ನೇ ಅಕ್ಷಯ ಸಂ॥ ದಿಂದ ಶ॥ ೧೬೧೧ ನೇ ಶುಕ್ಲ ಸಂ॥ ದ ವರೆಗೆ .... ೩

ಈ ಕಾಲದಲ್ಲಿ ದಳವಾಯಿ ಮುದ್ದಂಣ ಮುಮ್ಮ್ಮಡಿ ಮದಕರಿನಾಯಕನನ್ನು ಕೊಲ್ಲಿಸಿ ಹಾವಳಿಮಾಡಿ ತಾನೇ ರಾಜ್ಯವಾಳಲು ಆರಂಭಿಸಿದ್ದು. ಇಲ್ಲಿಗೆ ಮತ್ತಿ ಸಂತತಿ ನಿರ್ವಂಶವಾಯಿತು. ಒಟ್ಟು ೬ ಜನ ಆಳಿದ್ದು. ವರುಷ ೧೨೬.

## ಬಿಳಿಚೋಡು ಸಂತತಿ.

೭ ಭರಮಪ್ಪನಾಯಕ ಶ॥ ೧೬೧೧ ನೇ ಶುಕ್ಲ ಸಂ॥ ದಿಂದ ಶ॥ ೧೬೪೨ ನೇ ಪ್ಲವ ಸಂ॥ ದವರೆಗೆ .... ೩೨

೮ ಈತನ ಮಗ ಹಿರೀ ಮದಕರಿನಾಯಕ ಶ॥ ೧೬೪೨ ನೇ ಪ್ಲವ ಸಂ॥ ದಿಂದ ಶ॥ ೧೬೭೦ ನೇ ವಿಭವ ಸಂ॥ ದ ವರೆಗೆ .... ೨೭

೯ ಈತನ ಮಗ ಇಮ್ಮ್ಮಡಿ ಕಸ್ತೂರಿ ರಂಗಪ್ಪನಾಯಕ ಶ॥ ೧೬೭೦ನೇ ವಿಭವ ಸಂ॥ ದಿಂದ ಶ॥ ೧೬೭೬ನೇ ಭಾವ ಸಂ॥ ದ ವರೆಗೆ .... ೬

೧೦ ಕಡೇ ಮದಕರಿನಾಯಕ ಶ॥ ೧೬೭೬ ನೇ ಭಾವ ಸಂ॥ ದಿಂದ ಶ॥ ೧೭೦೦ ನೇ ವಿಳಂಬಿ ಸಂ॥ ದ ವರೆಗೆ .... .... ೨೪

ಅಂತು ಎರಡು ಸಂತತಿಯಿಂದ ಒಟ್ಟು ೧೦ ಜನ ದೊರೆಗಳು ಆಳಿದ ವರುಷ ೨೧೧.

---

# ಅಪೂರ್ವವಾದ ಶಬ್ದಗಳ ಅರ್ಥಸಹಿತವಾದ ಪಟ್ಟಿ.

**ಅ**

ಅಂಪ್ರಗಕೊಡು—ಅಪ್ಪಣೆ ಕೊಡು.

**ಇ**

ಏಕನಾಥಮ್ಮನನ್ನು ಇದಿರೆತ್ತು—ಏಕನಾಥಮ್ಮ ದೇವರ ಹೆಸರಿನಿಂದ ಪೂಜೆ ಮಾಡುವುದು. (ಆ ದೇವರ ಹೆಸರ ಹೇಳಿ ಬೇರೇ ಸ್ಥಳದಲ್ಲಿ ಆ ದೇವರ ಪೂಜೆ ಮಾಡುವುದು.)

**ಉ**

ಉಲುಪೆ—ಒಂದು ಕೆಲಸಕ್ಕೆ ಬೇಕಾಗುವ ಪದಾರ್ಥವನ್ನು ಅಥವಾ ಹಣವನ್ನು ಜನರು ತಂತಮ್ಮ ಕೈಲಾದಮಟ್ಟಿಗೆ ಹಂಚಿಕೊಂಡು ಕೊಡುವ ಭಾಗ ಅಥವಾ ಚಂದ.

**ಎ**

ಎಕ್ಕಂಡೆ ಸಿಪಾಯಿಗಳು—ಉದ್ದ, ಗಾತ್ರ, ತಕ್ಕಹಾಗೆ ಬಲವಾಗಿರುವ ಸಿಪಾಯಿಗಳು.

**ಕ**

ಕಂಪಳ—ಗುಂಪು ಅಥವಾ ಪರಿವಾರ, ಕೂಟ.

ಕೈಜೇತದ ಆಳು—ಸರ್ಕಾರದ ಸಂಬಳವಿಲ್ಲದೆ ಸ್ವಂತವಾಗಿ ಸಂಬಳ ಕೊಡತಕ್ಕ ಆಳಿಗೆ ಸಂಬಳದಾಳು ಎಂದು ಹೆಸರು.

ಜೇತ—ಹಣ ಸಾಲಾತೆಗೆದುಕೊಂಡು ಅನ್ನಬಟ್ಟೆ ತೆಗೆದುಕೊಳ್ಳುತಾ ಸಾಲಾ ತೀರುವತನಕ ಆಳು ಚಾಕರಿಮಾಡಿದರೆ ಆ ಚಾಕರಿಗೆ ಜೇತವೆಂದು

ಹೆಸರು. ಅಂಥಾ ಕೆಲಸವನ್ನು ಮಾಡುವ ಆಳಿಗೆ ಜೀತಗಾರ ಎಂದು ಹೆಸರು.

ಕೊಲ್ಲಾರಿ—ಮುಖಂಡರು ; ಹುದ್ದೇದಾರರು ; ಪ್ರಮುಖರು.

ಕೋವಿ—ಜಾವಿಗೆ ಬತ್ತಿಯನ್ನು ಕಬ್ಬಿಣದ ನಾಳದ ಕಿಪಿಗೆ ತೋರಿಸಿ ಹಾರಿಸುವ ಬಂದೂಖು. ಇದಕ್ಕೆ ಕರ್ನಾಟಕ ಬಂದೂಖು ಎಂತಲೂ ಹೇಳುತಾರೆ

**ಖ**

ಖಂಡಣಿ ಹಣ—ಗೊತ್ತಾದ ಪೊಗದಿ ಹಣ.

ಖಡೆ—ಕೈಗೆ ಹಾಕುವ ಬೆಳ್ಳಿ ಅಥವಾ ಚಿನ್ನದ ಬಳೆ. ಒಂಧು ಬಿರುದು.

**ಗ**

ಗುಡ್ಡೆ ಮಾಡು—ಹೆಣವನ್ನು ನೆಲದಲ್ಲಿ ಹೂಳಿ ಮಣ್ಣುಗುಡ್ಡೆ ಮಾಡುವುದು ಅಥವಾ ಸಮಾಧಿ ಮಾಡುವುದು.

ಗುರದಕತ್ತಿ—

ಗೋಲಂದಾಸು—ಫಿರಂಗಿಹಾರಿಸುವ ಸಿಪಾಯಿಗಳು.

**ಛ**

ಛತ್ರಪತಿ ಖಡೆಯಶೋವಂತ—ಬಿರುದು.

**ಜ**

ಜಾಸೂದು ವೇಷಧಾರಿಗಳು—ಗೂಢಚಾರರು.

**ತ**

ತಾಕುವೇಕಿನ ಮಾತು—ಲಕ್ಷ್ಯವಿಲ್ಲದೆ ಅಹಂಕಾರದಿಂದ ಆಡುವ ತಿರಸ್ಕಾರದಮಾತು.

ತಳಸುರಂಗ—

## ದ

ದೆಸೆಗಟ್ಟನಧೂಳತ—ಸಣ್ಣಗಿರುವ ಮಣ್ಣಿನ ಹುಡಿಗೆ ಧೂಳು ಎಂದು ಹೆಸರು. ಕಡೇತ ಕಾರವು ತದ್ಧಿತ ಪ್ರತ್ಯಯವಾಗಿ ಬಂದಿದೆ ರೂಢಿಯಲ್ಲಿ ದೇವರ ಪಾದದಲ್ಲಿರುವ ಧೂಳು, ಅಥವಾ ವಿಭೂತಿಗೆ ಈ ಹೆಸರು ಬಂದಿದೆ, ಇದಕ್ಕೆ ಪಾದರೇಣು ವೆಂದು ಸಹಾ ವಾಡಿಕೆ ಇದೆ.

ದರಶನ ಕಟ್ಟುವುದು—ಜೋಗಿತ್ತೀರಹಾಗೆ ಬಿಳೀಮಣಿ, ಹವಳದ ಮಣಿ ಸರಹಾಕಿಕೊಳ್ಳವುದು.

ದಂಡಕ—ವಿಧಿ, ವಾಡಿಕೆ.

ದಬದಬ ಕಟ್ಟುವುದು—ಎತ್ತರವಾದ ತಿಟ್ಟು, ಜಗಲಿ, ಮೇಲೆ ಫಿರಂಗಿ ಇಡುವುದು.

ಧರ್ಮ ಕಹಳೆ—ಯುದ್ಧ ನಡೆಯುತಿರುವಾಗ ಜಗಳವನ್ನು ನಿಲ್ಲಿಸಬೇಕೆಂದು ಊದುವ ಕಹಳೆ ಅಥವಾ ಕೊಂಬು; ಇದು ಅರಿಸಮಾಸವಾದರೂ ರೂಢಿ ಯಲ್ಲಿ ಪೂರ್ವದಿಂದಲೂ ಪ್ರಯೋಗದಲ್ಲಿದೆ.

ದಿವಾಣ—ಸರ್ಕಾರ (ರೆವಿನ್ಯೂ) ಬೊಕ್ಕಸ.

## ನ

ನಾಗತಿ—ನಾಯಕನ ಹೆಂಡತಿ ನಾಯಕಿತಿ, ಉಚ್ಚಾರಣೆ ವೇಗವಾಗಿ ಮಾಡುವುದರಿಂದ ಶಬ್ದವು ಈ ರೂಪವನ್ನು ಹೊಂದಿದಂತೆ ತೋರುತ್ತೆ.

ನಾಕಚಾಪು—ಚಿಲ್ಲರೆ ಸಾಮಾನುಗಳನ್ನು ಹಾಕಿ ಸಿಪಾಯಿ ಗಳು ಬೆನ್ನಿಗೆ ಕಟ್ಟಿಕೊಳ್ಳುವ ಚೀಲ. ನ್ಯಾಪ್‌ಸ್ಯಾಕ್ ಎಂಬ ಇಂಗ್ಲೀಷ್ ಶಬ್ದ ಕೆಟ್ಟು ಈ ಶಬ್ದ ಹುಟ್ಟಿರುವಂತೆ ಕಾಣುತ್ತೆ.

ನೆಟ್ಟಫಿರಂಗಿ—ಒಂದು ಕಡೆ ಇಟ್ಟಿರುವ ಫಿರಂಗಿ ಎಂದು ಹೇಳುತಾರೆ.

**ಪ**

ಪಂಚಮರು—ಬಲಗೈಯವರು ಅಥವಾ ಹೊಲೆಯರಿಗೆ ಈ ಹೆಸರು ಬಂದಿದೆ. ಆದರೆ ಶಿವಭಕ್ತರಲ್ಲಿ ಪಂಚಾಚಾರದವರು ಎಂದು ಇದಾರೆ, ಸಾಧಾರಣ ಶಿವಭಕ್ತರಿಗೂ ಪಂಚಮರಿಗೂ ಆಚಾರದಲ್ಲಿ ಸ್ವಲ್ಪ ಭೇದವಿದೆ ಎನ್ನುತಾರೆ.

ಪಾಯಿನ ಖಿಲ್ಲೆ—ಬಲವಾಗಿರಲು ಚಿತ್ರದುರ್ಗದ ಬೆಟ್ಟದಮೇಲೆ ಹಿಂಭಾಗದಲ್ಲಿ ಕಟ್ಟಿರುವ ಮೇಲ್ಗಡೆಕೋಟೆ.

ಪ್ರಾಣತ್ರಾಣಪರಾಯಣರು-ಪ್ರಾಣವನ್ನು ಕಾಪಾಡಿಕೊಳ್ಳುವುದೇ ಮುಖ್ಯೋದ್ದೇಶವಾಗಿರತಕ್ಕವರು.

ಫೌಜುದಾರಿ—ದಂಡಿನ ಬಂದೊಂದು ತುಕಡಿ ಇಟ್ಟುಕೊಂಡು ಅದಕ್ಕೆ ಅಧಿಕಾರ ಮಾಡುವುದು. ಇದೇ ಇದಕ್ಕೆ ಮೊದಲ ಅರ್ಥ. ಬಂದೊಂದು ಪ್ರಾಂತದಲ್ಲಿ ರಾಜ್ಯದ ಆಡಳತ ನಡಿಸುವುದಕ್ಕೋಸ್ಕರ ಇರತಕ್ಕ ಅಧಿಕಾರಿಗಳಗೂ ಈಚೆಗೆ ಈ ಹೆಸರು ಬಂತು. ಇದು ಡೆಪ್ಯುಟಿಕಮಿಷನರ ಹುದ್ದೆಗೆ ಸಮಾನವಾದ್ದು.

**ಬ**

ಬಿಚ್ಚುಫಿರಂಗಿ—ದೊರೆಯ ಸಂಗಡ ತೆಗೆದುಕೊಂಡುಹೋಗುವ ಆಯುಧ.

ಬಿರಾದರಿ—ಕುದುರೇಸೇನೆಯ ಬಂದು ಭಾಗ. ಸವಾರಕಚೇರಿ ಇಲಾಖೆಯಲ್ಲಿ ಬಿರಾದರಿಗೆ ಇರಬೇಕಾದ ಕುದುರೆ ಸಂಖ್ಯೆಯನ್ನು ಗೊತ್ತುಮಾಡಿದಾರೆ.

ಬೇಡಿಹಾಕು—ಮುತ್ತಿಗೆ ಹಾಕು.

**ಭ**

ಭಾರಿನಿಗಳಾಂಕ—ಭಾರಿ-ಸಿಂಹ, ನಿಗಳ-ಬೇಡಿ.

ಮ

ಮರೋಲಿ, ಚೀಳುಗಟ್ಟಿದ—ಮರೆ-ಮರಸು, ತಪ್ಪಲು-ಕಿಚ್ಚು.

ಮಕರಡಿಬ್ಬಿ—

ರ

ರೊಪ್ಪ—ಮನುಷ್ಯರ ಅಥವಾ ಕುರಿದನ ಮೊದಲಾದ ಜಂತುಗಳ ಸಂರಕ್ಷಣೆಗಾಗಿ ಸುತ್ತಲೂ ಮುಳ್ಳಬೇಲಿ ಹಾಕಿರುವ ಆವರಣ.

ಲ

ಲಡಾಯಿ—ಯುದ್ಧ.

ಲಗ್ಗೆ—ಮುತ್ತಿಗೆ, ಕದನ.

ಷ

ಷುತರ್‌ನಾಲ್—

ಸ

ಸಮ್ಮಾಳಗೆಗೆ ಹಾಕು—

ಸರ್ಜ—ಮಣಿ,ರತ್ನ (ಗಂಡುಗೊಡಲಿಯ ಸರ್ಜ-ಗಂಡುಗೊಡಲಿ ಹಿಡಿದು ಯುದ್ಧಮಾಡುವವರಲ್ಲಿ ರತ್ನಪ್ರಾಯ).

ಸಂದಣಿ ಸವಾರ—

ಸೂಲದ ಮರದಮೇಲಿನ ಫಿರಂಗಿ—

ಸೊನ್ನೇಬಾಣ—ಬಿಟ್ಟಕೂಡಲೇ ಸುತ್ತಿಕೊಂಡು ಸುತ್ತಿಕೊಂಡು ಹೋಗಿ ಹೆಚ್ಚಾದ ಅಪಾಯವನ್ನುಂಟುಮಾಡುವ ಬಾಣ.

ಸ್ವಾರಿ ಫಿರಂಗಿ—ದೊರೆಯ ಸಂಗಡ ತೆಗೆದುಕೊಂಡು ಹೋಗುವ ಕತ್ತಿ. ಇದನ್ನು ಸ್ವಾರಿ ಫಿರಂಗಿ ಎಂತಲೂ ಬರೆಯುತಾರೆ.

ಹ

ಹತ್ಯಾರ್‌ದಲ್—

ಹಜರತ್ತು ಮುಕ್ಕಂಣಿ ಪಂಚಕಸೆಭಲ್ಲೆ—

ಹೊಲಬು—ಸರಹದ್ದು.

# ಕಾಲಾನುಸರಣಿಕೆ.

**ಶ॥—ಶಾಲೀವಾಹನ ಶಕ.**

**ಕ್ರಿ॥—ಕ್ರಿಸ್ತಶಕ.**

ಶ॥ ೧೪೭೮, ಕ್ರಿ॥ ೧೫೫೫, ನಳಸಂವತ್ಸರದಲ್ಲಿ:—
ಚಿತ್ರದುರ್ಗಕ್ಕೆ ನಾಡ ತಳವಾರರು ಬಂದದ್ದು, ರಾಜ್ಯಸ್ಥಾಪನೆ.

ಶ॥ ೧೪೯೦, ಕ್ರಿ॥ ೧೫೬೭, ವಿಭವ ಸಂ॥ ದಲ್ಲಿ:—
ವಿಜಯನಗರದ ರಾಜರು ತಿಮ್ಮಂಣನಾಯಕನನ್ನು ಚಿತ್ರದುರ್ಗಕ್ಕೆ ನಾಯಕನನ್ನಾಗಿ ನೇಮಿಸಿದ್ದು.

ಶ॥ ೧೪೯೩, ಕ್ರಿ॥ ೧೫೬೯, ಪ್ರಮೋದೂತ:—
ತಿಮ್ಮಂಣನಾಯಕನ ಮದುವೆ. ರಂಗಪಟ್ಟಣ ಕಟ್ಟಿದ್ದು.

ಶ॥ ೧೪೯೪, ಕ್ರಿ॥ ೧೫೭೧, ಆಂಗೀರಸ ಸಂ॥ ದಲ್ಲಿ:—
ತರೀಕೆರೆ ದಂಡು ಬಂದು ರಂಗಪಟ್ಟಣಕ್ಕೆ ಲಗ್ಗೆ ಹಾಕಿದ್ದು.

ಶ॥ ೧೪೯೫, ಕ್ರಿ॥ ೧೫೭೨, ಶ್ರೀಮುಖ ಸಂ॥ ದಲ್ಲಿ:—
ಮೇಲ್ದುರ್ಗದ ಅರಮನೆ ಕಟ್ಟಿದ್ದು. ತಿಮ್ಮಂಣನಾಯಕನಿಗೆ ವಿಜಯನಗರದ ಚಕ್ರವರ್ತಿಗಳು ದುರ್ಗದ ನಾಯಕತನ ಕೊಟ್ಟಿದ್ದು.

ಶ॥ ೧೫೦೩, ಕ್ರಿ॥ ೧೫೭೯, ವಿಕ್ರಮ ಸಂ॥ ದಲ್ಲಿ:—
ಸಾಳೋ ನರಸಿಂಗರಾಯ ದುರ್ಗಕ್ಕೆ ಮುತ್ತಿಗೆ ಹಾಕಿದ್ದು.

ಶ॥ ೧೫೦೪, ಕ್ರಿ॥ ೧೫೮೧, ಚಿತ್ರಭಾನು ಸಂ॥ ದಲ್ಲಿ:—
ತಿಮ್ಮಂಣನಾಯಕ ಕಲ್ಬರ್ಗೀಗೆ ಮುತ್ತಿಗೆ ಹಾಕಿದ್ದು; ಇವನಿಗೆ ವಿಜಯನಗರದ ರಾಜರು "ಹಗಲುಕಗ್ಗೊಲೆಮಾನ್ಯ" ಎಂದು ಬಿರದುಕೊಟ್ಟಿದ್ದು.

ಶ॥ ೧೫೧೦, ಕ್ರಿ॥ ೧೫೮೭, ಸರ್ವಧಾರಿ ಸಂ॥ ದಲ್ಲಿ:—
ಓಬಳಂಣನಾಯಕ ವಿಜಯನಗರದಿಂದ ದುರ್ಗಕ್ಕೆ ಬಂದದ್ದು.

ಶ|| ೧೫೧೧, ಕ್ರಿ|| ೧೫೮೯, ವಿರೋಧಿ ಸಂ|| ದಲ್ಲಿ:—

ವಿಜಯನಗರದವರ ಅಧಿರಾಜತ್ವ ಚಿತ್ರದುರ್ಗದಮೇಲೆ ತಪ್ಪಿ ಹೋದ್ದು.

ಶ|| ೧೫೨೫, ಕ್ರಿ|| ೧೬೦೩, ಶೋಭಕೃತು ಸಂ|| ದಲ್ಲಿ:—

ಓಬಳಣ್ಣನಾಯಕನ ಮರಣ, ಕಸ್ತೂರಿರಂಗಪ್ಪನಾಯಕನಿಗೆ ಪಟ್ಟ.

ಶ|| ೧೫೨೮, ಕ್ರಿ|| ೧೬೦೬, ಪರಾಭವ ಸಂ|| ದಲ್ಲಿ:—

ಕಸ್ತೂರಿ ರಂಗಪ್ಪನಾಯಕನ ಮದುವೆ; ರಂಗಪಟ್ಟಣ ಪುನಃ ಕಟ್ಟಿದ್ದು.

ಶ|| ೧೫೫೪, ಕ್ರಿ|| ೧೬೩೨, ಅಂಗೀರಸ ಸಂ|| ದಲ್ಲಿ:—

ತರೀಕೆರೆಯ ಪೂವಲ ಹನುಮಪ್ಪನಾಯಕನು ಚಿತ್ರಹಳ್ಳಿ ಮುಂತಾದ ೫ ಗಡಿ ದುರ್ಗಗಳಿಗೆ ಮುತ್ತಿಗೆ ಹಾಕಿದ್ದು.

ಶ|| ೧೫೫೫, ಕ್ರಿ|| ೧೬೩೩, ಶ್ರೀಮುಖ ಸಂ|| ದಲ್ಲಿ:—

ದುರ್ಗದ ಅರಮನೆ ಸುತ್ತಿನ ಕೋಟೆ ಕಟ್ಟಿದ್ದು.

ಶ|| ೧೫೫೮, ಕ್ರಿ|| ೧೬೩೬, ಧಾತು ಸಂ|| ದಲ್ಲಿ:—

ತರೀಕೆರೆ ಪಾಳಯಗಾರರು ದುರ್ಗದಮೇಲೆ ದಂಡೆತ್ತಿ ಬಂದು ಸೋತು ಹೋದ್ದು.

ಶ|| ೧೫೫೯, ಕ್ರಿ|| ೧೬೩೭, ಧಾತು-ಈಶ್ವರ ಸಂ|| ದಲ್ಲಿ.

ಹರಪನ ಹಳ್ಳಿಯವರ ಮೇಲೆ ಯುದ್ಧ. ಅವರು ಸೋತುಹೋದ್ದು. ಕಸ್ತೂರಿ ರಂಗಪ್ಪನಾಯಕನ ಅಳಿಯ ಕೃಷ್ಣಪ್ಪ ಪಿತೂರಿಯಿಂದ ರಾತ್ರಿ ಸೇನೆಯೊಡನೆ ಕೋಟೆಯೊಳಕ್ಕೆ ನುಗ್ಗಿದ್ದು. ಕುಮಾರ ಮದಕರಿಯಣ್ಣ (ಸರ್ಜೆರಾಯ) ನ ಪರಾಕ್ರಮ.

ಶ|| ೧೫೬೦, ಕ್ರಿ|| ೧೬೩೮, ಈಶ್ವರ ಸಂ|| ದಲ್ಲಿ.

ಸೀರ್ಯದ ರಂಗಪ್ಪನಾಯಕ ಹಿರಿಯೂರಿಗೆ ಮುತ್ತಿಗೆ ಹಾಕಿದ್ದು.

ಶ॥ ೧೫೬೧, ಕ್ರಿ॥ ೧೬೩೮, ಬಹುಧಾನ್ಯ ಸಂ॥ ದಲ್ಲಿ.

ಸರ್ಜೆರಾಯನ ಮದುವೆ.

ಶ॥ ೧೫೬೭, ಕ್ರಿ॥ ೧೬೪೪, ತಾರಣ ಸಂ॥ ದಲ್ಲಿ.

ಸರ್ಜೆರಾಯನ ಮರಣ.

ಶ॥ ೧೫೭೫, ಕ್ರಿ॥ ೧೬೫೨, ನಂದನ ಸಂ॥ ದಲ್ಲಿ.

ಕಸ್ತೂರಿ ರಂಗಪ್ಪನಾಯಕನ ಮರಣ. ಇಮ್ಮಡಿ ಮದಕರಿನಾಯಕನ ಪಟ್ಟಾಭಿಷೇಕ.

ಶ॥ ೧೫೭೬, ಕ್ರಿ॥ ೧೬೫೩, ವಿಜಯ ಸಂ॥ ದಲ್ಲಿ.

ತರೀಕೆರೆ ಪಾಳಯಗಾರರೊಡನೆ ಯುದ್ಧ.

ಶ॥ ೧೫೮೫, ಕ್ರಿ॥ ೧೬೬೨, ಶುಭಕೃತ್ ಸಂ॥ ದಲ್ಲಿ.

ಹಿರಿಯೂರ ಕೋಟೆ ಮುತ್ತಿಗೆ.

ಶ॥ ೧೫೯೬-೭, ಕ್ರಿ॥ ೧೬೭೩-೪, ಆನಂದ-ರಾಕ್ಷಸ ಸಂ॥ ದಲ್ಲಿ.

ಇಮ್ಮಡಿ ಮದಕರಿನಾಯಕನ ಮರಣ, ಇವನ ಸಾಕುಮಗ ಓಬಳಂಣನಿಗೆ ಪಟ್ಟವಾದ್ದು, ಠಾಣೆ ಗುರಿಕಾರರೂ, ದಂಡಿನವರೂ ದಂಗೆ ಎದ್ದದು. ಹೊಸದೊರೆ ಓಬಂಣನ ತಲೆ ಹುಯಿದದ್ದು. ಚಿಕ್ಕಂಣನಿಗೆ ಪಟ್ಟವಾದ್ದು.

ಶ॥ ೧೫೯೮, ಕ್ರಿ॥ ೧೬೭೫, ನಳ ಸಂ॥ ದಲ್ಲಿ.

ನಿಡಗಲ್ಲವರು ಸಾಣೇಕೆರೆಗೆ ಮುತ್ತಿಗೆ ಹಾಕಿದ್ದು. ಹರಪನಹಳ್ಳಿಯವರೊಡನೆ ಯುದ್ಧ.

ಶ॥ ೧೫೯೯, ಕ್ರಿ॥ ೧೬೭೬, ಪಿಂಗಳ ಸಂ॥ ದಲ್ಲಿ.

ಮೊಗಲಾಯರ ಷಂಷೇರ್ಖಾನನ ದಂಡು ಹರಿಹರವನ್ನು ಮುತ್ತಿದ್ದು.

ಶ॥ ೧೬೦೦, ಕ್ರಿ॥ ೧೬೭೭, ಕಾಳಾಯುಕ್ತಿ ಸಂ॥ ದಲ್ಲಿ.

ಅರಮನೆಯವರೆಲ್ಲರೂ ಲಿಂಗವಂತರಾಗಿ ನಾಲ್ಕು ತಿಂಗಳಲ್ಲಿ ಆ ಮತವನ್ನು ಬಿಟ್ಟದ್ದು.

ಶ॥ ೧೬೦೧, ಕ್ರಿ॥ ೧೬೭೯, ಸಿದ್ಧಾರ್ಥಿ ಸಂ॥ ದಲ್ಲಿ.

ದೊರೆಯ ಚಂದ್ರಾಯುಧಕ್ಕೆ ಮದುವೆಯಾದ್ದು.

ಶ॥ ೧೬೦೨, ಕ್ರಿ॥ ೧೬೮೦, ರೌದ್ರಿ ಸಂ॥ ದಲ್ಲಿ.

ರಣದುಲ್ಲಾಖಾನನ ಹಾವಳಿಯೇ ಮೊದಲಾದ ಯುದ್ಧ ಪ್ರಸಕ್ತಿ.

ಶ॥ ೧೬೦೭, ಕ್ರಿ॥ ೧೬೮೫, ಕ್ರೋಧನ ಸಂ॥ ದಲ್ಲಿ.

ಹರಪನಹಳ್ಳಿಯವರೊಡನೆ ಕದನ, ದುರ್ಗದವರಿಗೆ ಅಪಜಯ.

ಶ॥ ೧೬೦೮, ಕ್ರಿ॥ ೧೬೮೬, ಅಕ್ಷಯ ಸಂ॥ ದಲ್ಲಿ.

ಚಿಕ್ಕಂಣನಾಯಕನ ನಿರ್ಯಾಣ. ಇವರ ಅಂಣ ಮುಮ್ಮಡಿ ಮದ ಕರಿನಾಯಕನಿಗೆ ಪಟ್ಟ.

ಶ॥ ೧೬೧೦, ಕ್ರಿ॥ ೧೬೮೮, ವಿಭವ ಸಂ॥ ದಲ್ಲಿ.

ದಳವಾಯಿ ಮುದ್ದಂಣನ ಹಾವಳಿ, ಮುಮ್ಮಡಿ ಮದಕರಿನಾಯಕ ನನ್ನು ಸೇನೆಯವರು ಕೊಂದದ್ದು, ಮತ್ತು ವಂಶ ನಿಸ್ಸಂತತಿ ಯಾದದ್ದು, ದಳವಾಯಿಯು ರಾಜ್ಯವಾಳಲು ಆರಂಭಿಸಿದ್ದು, ದೊಂಣೆ ರಂಗಪ್ಪನನ್ನು ನೆಪಕ್ಕೆ ಪಟ್ಟಕ್ಕೆ ಕೂರಿಸಿದ್ದು.

ಶ॥ ೧೬೧೧, ಕ್ರಿ॥ ೧೬೮೯, ಶುಕ್ಲ ಸಂ॥ ದಲ್ಲಿ.

ಬಿಳಿಚೋಡುವಂಶಕ್ಕೆ ದೊರೆತನ ಬಂದದ್ದು, ಭರಮಪ್ಪನಾಯಕ ನಿಗೆ ಪಟ್ಟವಾದ್ದು, ಹರಪನಹಳ್ಳಿಯವರು ಅಣಜಿಗೆ ಮುತ್ತಿಗೆ ಹಾಕಿದ್ದು, ದುರ್ಗದವರಿಗೆ ಸೋಲಾದ್ದು.

ಶ॥ ೧೬೧೮, ಕ್ರಿ॥ ೧೬೯೬, ಧಾತು ಸಂ॥ ದಲ್ಲಿ.

ಸಂತೋಜಿ ಘೋರ್ಪಡೆಯು ಮರಾಟೆ ದಂಡಿನೊಡನೆ ಬಂದು ಮುತ್ತಿಗೆ ಹಾಕಿ ಸೋತುಹೋದ್ದು, ಸೂರ್ಯಕಾಂತಪ್ಪನ ಮಗ ರಂಗಪ್ಪನ ಪುಂಡು ಹಾವಳಿ.

ಶ॥ ೧೬೨೧, ಕ್ರಿ॥ ೧೬೯೯, ಪ್ರಮಾಥಿ ಸಂ॥ ದಲ್ಲಿ.

ರಾಯದುರ್ಗದವರೊಡನೆ ಯುದ್ಧ, ದುರ್ಗದವರಿಗೆ ಜಯವಾದ್ದು.

ಶ|| ೧೬೨೫, ಕ್ರಿ|| ೧೭೦೩, ಸ್ವಭಾನು ಸಂ|| ದಲ್ಲಿ.
ಗುಳ್ಳೇರೋಗ ತಗಲಿ ಜನ ಲಯವಾದ್ದು.

ಶ|| ೧೬೨೮, ಕ್ರಿ|| ೧೭೦೫, ವ್ಯಯ ಸಂ|| ದಲ್ಲಿ.
ಅಣಜಿ ಕೋಟೆ ಹಾರಿಕೂತದ್ದು.

ಶ|| ೧೬೨೯, ಕ್ರಿ|| ೧೭೦೬, ಸರ್ವಜಿತು ಸಂ|| ದಲ್ಲಿ.
ಪುನಃ ರಾಯದುರ್ಗದವರ ಯುದ್ಧ.

ಶ|| ೧೬೩೧, ಕ್ರಿ|| ೧೭೦೮, ವಿರೋಧಿ ಸಂ|| ದಲ್ಲಿ.
ದುರ್ಗದ ದೊರೆಗೆ ಹರಪನಹಳ್ಳಿಯಲ್ಲಿ ಉಂಟಾದ ಪ್ರತಿಷ್ಠೆ.

ಶ|| ೧೬೪೧-೨, ಕ್ರಿ|| ೧೭೧೮-೯, ಶಾರ್ವರಿ ಸಂ|| ದಲ್ಲಿ.
ಮೊಗಲಾಯರಿಗೆ ಸಹಾಯಮಾಡಿದ್ದು.

ಶ|| ೧೬೪೨, ಕ್ರಿ|| ೧೭೧೯, ಪ್ಲವ ಸಂ|| ದಲ್ಲಿ.
ಬಿಜಾಪುರದವರು ದಂಡೆತ್ತಿಬಂದದ್ದು, ಭರಮಪ್ಪನಾಯಕನಿಗೆ ಆದ ವಿಜಯ, ಆತನ ನಿರ್ಯಾಣ, ಹಿರೀ ಮದಕರಿನಾಯಕನಿಗೆ ಪಟ್ಟವಾದ್ದು.

ಶ|| ೧೬೪೪. ಕ್ರಿ|| ೧೭೨೧, ಶೋಭಕೃತು ಸಂ|| ದಲ್ಲಿ.
ಶ್ರೀರಂಗಪಟ್ಟಣದವರು ಹಿರೀ ಮದಕರಿನಾಯಕನಿಗೆ ಮಿತ್ರಭಾವದಲ್ಲಿ ಕರೀತ ಬರೆದದ್ದು, ಸೀರ್ಯದ ಮೊಗಲ್ ಸುಬೇದಾರನು ಸಂಣಕ್ಕಿ, ಬಾಗೂರು ಮೊದಲಾದ ಕೋಟೆಗಳನ್ನು ದುರ್ಗದ ವರಿಗೆ ಕೊಟ್ಟದ್ದು.

ಶ|| ೧೬೪೭, ಕ್ರಿ|| ೧೭೨೪, ಪರಾಭವ ಸಂ|| ದಲ್ಲಿ.
ದೊಡ್ಡ ಬರ ಬಂದದ್ದು, ಮರಾಟೆ ಸರದಾರ ಪೀರೋಜೀ ದಂಡು ಬಂದು ಕೂನಬೇವನ್ನು ಹಿಡಿದದ್ದು.

ಶ|| ೧೬೬೨, ಕ್ರಿ|| ೧೭೩೯, ದುರ್ಮತಿ ಸಂ|| ದಲ್ಲಿ.
ಆಶ್ವೀಜ ಶು|| ೧೦ ಯಿಂದ ಕಾರ್ತೀಕ ಶು|| ೫ ವರೆಗೆ ೨೫ ದಿವಸ ಹುಚ್ಚುಮಳೆ ಹುಯಿದು ನಷ್ಟವಾದ್ದು.

ಶ|| ೧೬೬೪, ಕ್ರಿ|| ೧೭೪೧, ರುಧಿರೋದ್ಗಾರಿ ಸಂ|| ದಲ್ಲಿ.
ರಾಯದುರ್ಗವನ್ನು ಮಲೆನಾಡವರು ಹಿಡಿದದ್ದು, ಅದನ್ನು ದುರ್ಗದವರು ಮುತ್ತಿ ತೆಗೆದುಕೊಂಡದ್ದು.

ಶ|| ೧೬೬೯-೭೦, ಕ್ರಿ|| ೧೭೪೬, ವಿಭವ ಸಂ|| ದಲ್ಲಿ.
ಭೂಕಂಪವಾಗಿ ನಷ್ಟವಾದ್ದು.

ಶ|| ೧೬೭೦, ಕ್ರಿ|| ೧೭೪೭-೮, ವಿಭವ ಸಂ|| ದಲ್ಲಿ.
ಮಾಯಿಕೊಂಡಕ್ಕೆ ಶತ್ರುಗಳು ಮುತ್ತಿಗೆ ಹಾಕಿದ್ದು, ಹಿರೀ ಮದಕರಿನಾಯಕ ವೀರ ಸ್ವರ್ಗ ಹೊಂದಿದ್ದು, ಇಮ್ಮಡಿ ಕಸ್ತೂರಿ ರಂಗಪ್ಪನಾಯಕನಿಗೆ ಪಟ್ಟವಾದ್ದು.

ಶ|| ೧೬೭೧, ಕ್ರಿ|| ೧೭೪೮, ಶುಕ್ಲ ಸಂ|| ದಲ್ಲಿ.
ಮಾಯಿಕೊಂಡದ ಮುತ್ತಿಗೆ ಎಬ್ಬಿಸಿದ್ದು.

ಶ|| ೧೬೭೬, ಕ್ರಿ|| ೧೭೫೩, ಭಾವ ಸಂ|| ದಲ್ಲಿ.
ಇಮ್ಮಡಿ ಕಸ್ತೂರಿ ರಂಗಪ್ಪನಾಯಕನ ನಿರ್ಯಾಣ, ಕಡೇ ಮದಕರಿನಾಯಕನಿಗೆ ಪಟ್ಟ.

ಶ|| ೧೬೭೮, ಕ್ರಿ|| ೧೭೫೫, ಧಾತು ಸಂ|| ದಲ್ಲಿ.
ಓಬಳವ್ವನಾಗತಿಯ ಮರಣ.

ಶ|| ೧೬೮೨, ಕ್ರಿ|| ೧೭೫೯-೬೦, ವಿಕ್ರಮ ಸಂ|| ದಲ್ಲಿ.
ಹೊಸಕೆರೆ ಯುದ್ಧ.

ಶ|| ೧೬೮೩, ಕ್ರಿ|| ೧೭೬೦, ವಿಷು ಸಂ|| ದಲ್ಲಿ.
ತರೀಕೆರೆಯವರೂ, ಜರಿಮಲೆಯವರೂ ಹಾವಳಿ ಮಾಡಿದ್ದು.

ಶ|| ೧೬೮೪, ಕ್ರಿ|| ೧೭೬೨, ಚಿತ್ರಭಾನು ಸಂ|| ದಲ್ಲಿ.

ಹೈದರಲ್ಲಿಯು ಲಕ್ಷ ದಂಡಿನೊಡನೆ ದುರ್ಗಕ್ಕೆ ಮುತ್ತಿಗೆ ಹಾಕಲು ಬಂದದ್ದು.

ಶ|| ೧೬೯೯, ಕ್ರಿ|| ೧೭೭೭, ಹೇವಿಳಂಬಿ ಸಂ|| ದಲ್ಲಿ.

ಹೈದರನೊಡನೆ ಕಡೇ ಯುದ್ಧ, ಚಿತ್ರದುರ್ಗದ ಮುತ್ತಿಗೆ ಮೊದಲಾದ್ದು.

ಶ|| ೧೭೦೦, ಕ್ರಿ|| ೧೭೭೮-೯, ವಿಳಂಬಿ ಸಂ|| ದಲ್ಲಿ.

ಚಿತ್ರದುರ್ಗದ ಸಂಸ್ಥಾನ ಹೋದ್ದು.

---